# ಧ್ಯಾನ ಕಸ್ತೂರಿ ಮಾಸಪತ್ರಿಕೆಯ ಪೋಷಕರು
## (LIFE PATRONS)




ಶ್ರೀ ಪಿ. ಚಂದ್ರಶೇಖರ ಶೆಟ್ಟಿ ಮತ್ತು ಅವರ ಕುಟುಂಬ



ಶ್ರೀ. ಎಮ್. ಚಂದ್ರಮೋಹನ್

ಈ ನವಯುಗದ ಆಧ್ಯಾತಿಕ ಮಾಸಪತ್ರಿಕೆಯು ಪ್ರತಿಯೊಬ್ಬರಿಗೂ ಮುಟ್ಟಲಿ ಎಂದು ಉನ್ನತ ಭಾವನೆಗಳೊಂದಿಗೆ ಅವರು ನೀಡುತ್ತಿರುವ ಪ್ರೋತ್ಸಾಹಕ್ಕೆ ಪತ್ರಿಕೆ ಓದುಗರು ಹಾಗೂ ಪತ್ರಿಕೆಯ ವಿಭಾಗವು ಅವರಿಗೂ, ಅವರ ಕುಟುಂಬಕ್ಕೂ ಹೃತ್ಪೂರ್ವಕವಾದ ಅಭಿನಂದನೆಗಳನ್ನು ಸಲ್ಲಿಸುತ್ತಿದೆ.

ಪತ್ರೀಜಿ ವಾಣಿ

# ಅಕ್ಷರಾಭ್ಯಾಸ

ಅ+ಕ್ಷರ = ಅಕ್ಷರ

ಕ್ಷರ ಆಗದಿರುವುದು ಅಕ್ಷರ

'ಕ್ಷರ' ಎಂದರೆ 'ನಶಿಸುವುದು'

'ಅಕ್ಷರ ಎಂದರೆ ನಶಿಸದಿರುವುದು' ಎಂದರ್ಥ.

ಚೈತನ್ಯ ಎಂದರೆ ಪ್ರಜ್ಞೆ(Consciousness)

ಚೈತನ್ಯ ಅಕ್ಷರ, ನಾಶವಾಗದಿರುವ ವಸ್ತು.

ನಾವು ಚೇತನಾಮಯ ಆತ್ಮರು

ಅನ್ನುವ ಸತ್ಯವನ್ನು

ಯಾವಾಗಲೂ ಅಭ್ಯಾಸದಲ್ಲಿಟ್ಟುಕೊಳ್ಳುವುದನ್ನೇ

'ಅಕ್ಷರಾಭ್ಯಾಸ' ಎನ್ನುತ್ತಾರೆ.

ಧ್ಯಾನಮಾಡುವುದೇ ಅಕ್ಷರಾಭ್ಯಾಸ

ಆತ್ಮಜ್ಞಾನವನ್ನು ಸರಿಯಾದ ರೀತಿಯಲ್ಲಿ ಪಡೆಯುವುದೇ ಅಕ್ಷರಾಭ್ಯಾಸ

ನಾವು ಹುಟ್ಟಿರುವುದೇ ಅಕ್ಷರಾಭ್ಯಾಸಕ್ಕಾಗಿ

ಅಕ್ಷರಾಭ್ಯಾಸ ಪೂರ್ತಿಯಾಗುವವರೆಗೂ,
'ಪುನರಪಿ ಜನನ ಪುನರಪಿ ಮರಣ' ತಪ್ಪದು

# ಧ್ಯಾನ ಕಸ್ತೂರಿ





**ಮುದ್ರಕರು ಹಾಗೂ ಪ್ರಕಾಶಕರು :**
**ಕರ್ನಾಟಕ ಪಿರಮಿಡ್ ಧ್ಯಾನ ಪ್ರಚಾರ ಟ್ರಸ್ಟ್(ರಿ)**
ನಂ. 126,ಪಿರಮಿಡ್ ಭವನ್, 2ನೇ ಮಹಡಿ, 7ನೇ ಮುಖ್ಯ ರಸ್ತೆ, 4ನೇ
ಬಡಾವಣೆ, ಜಯನಗರ, ಬೆಂಗಳೂರು - 560 011
ದೂರವಾಣಿ : 080-26646899, 9481359920

ಪ್ರಿಂಟರ್ಸ್ : ಡಾಟ್ಸ್ ಇನೋವೇಟಿವ್ ಪ್ರಿಂಟರ್ಸ್ ಸುಲ್ತಾನ್ ಪೇಟೆ, ಬೆಂಗಳೂರು
www.pssmovement.org

## ಪರಿವಿಡಿ



E-mail : dhyanakasturi@gmail.com





## ಸಂಪಾದಕೀಯ

'ಧ್ಯಾನ ಜಗತ್ 2012' ಎಂಬ ಘೋಷಣೆಯೊಂದಿಗೆ 2012ರ ಹೊತ್ತಿಗೆ ಇಡೀ ಜಗತ್ತನ್ನೇ ಆಧ್ಯಾತ್ಮೀಕರಿಸುವ ಬೃಹತ್ ಉದ್ದೇಶದಿಂದ, ಪಿರಮಿಡ್ ಸ್ಪಿರಿಚುಯಲ್ ಸೊಸೈಟೀಸ್ ಮೂವ್‌ಮೆಂಟ್ ಕಂಕಣತೊಟ್ಟು ಮುನ್ನಡೆದಿದೆ. ಈ ಉದ್ದೇಶವನ್ನು ಈಡೇರಿಸುವತ್ತ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ. ಈ ವರ್ಷದ ಪ್ರಮುಖವಾದ ಕಾರ್ಯಕ್ರಮವಾಗಿ 'ಆಧ್ಯಾತ್ಮಿಕ ವಿಜ್ಞಾನಿಗಳ ಜಾಗತಿಕ ಸಮ್ಮೇಳನವು' ಅಕ್ಟೋಬರ್ ತಿಂಗಳಲ್ಲಿ ಯಶಸ್ವಿಯಾಗಿ ನಡೆಸಲಾಗಿದೆ. ಇದೀಗ, ಜನಸಾಮಾನ್ಯರೂ ಸಹ ಧ್ಯಾನಿಗಳಾಗಿ ಭಾಗವಹಿಸಲು ಉತ್ಸುಕರಾಗಿರುವ ಮತ್ತೊಂದು ವಾರ್ಷಿಕ ಕಾರ್ಯಕ್ರಮವು ಆಯೋಜನೆಗೊಂಡಿದೆ. ಅದುವೇ, ಡಿ.25 ರಿಂದ 31ರವರೆಗೆ ಆಂಧ್ರಪ್ರದೇಶದ ಶ್ರೀಶೈಲಂನಲ್ಲಿ ನಡೆಯಲಿರುವ ''ತಾಂಡವ ಶಿವ ಸಂಗೀತ ನೃತ್ಯ ಧ್ಯಾನ ಮಹಾಯಜ್ಞ-2009'' ಆನಾಪಾನಸತಿ ಎಂಬ ಧ್ಯಾನ ಮಾರ್ಗವನ್ನು ಜಾಗತೀಕರಣಗೊಳಿಸುವಲ್ಲಿ ಮತ್ತು ಸಸ್ಯಾಹಾರೀ ಜೀವನ ಕ್ರಮವೇ ಅತ್ಯುತ್ತಮ ಎಂಬ ಸಂದೇಶಗಳನ್ನು ಸಾರಲು, ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಧ್ಯಾನಿಗಳ ಸಹಿತ, ಎಲ್ಲರೂ ಸಹ ಶ್ರೀಶೈಲಂನಲ್ಲಿ ಒಗ್ಗೂಡಬೇಕಾಗಿದೆ.

ಧ್ಯಾನಶಾಸ್ತ್ರ, ಪಿರಮಿಡ್‌ಶಾಸ್ತ್ರ ಮತ್ತು ಆಧ್ಯಾತ್ಮಿಕ ವಿಜ್ಞಾನಗಳನ್ನು ಶಾಸ್ತ್ರೀಯವಾಗಿ ಬೋಧಿಸಲು 'ಪಿರಮಿಡ್ ಅಕಾಡೆಮಿ ಆಫ್ ಸ್ಪಿರಿಚ್ಯುಯಲ್ ಸೈನ್ಸಸ್' ಎಂಬ ಶಿಕ್ಷಣ ಸಂಸ್ಥೆಯನ್ನು ಆರಂಭಿಸಲಾಗಿದೆ. ಆಸಕ್ತರೆಲ್ಲರೂ ಇದರ ಪ್ರಯೋಜನವನ್ನು ಪಡೆದು ಆಧ್ಯಾತ್ಮಿಕ, ಪಿರಮಿಡ್ ಧ್ಯಾನ ವಿಜ್ಞಾನಗಳನ್ನು ಅಧಿಕೃತವಾಗಿ ಎಲ್ಲರಿಗೂ ಕಲಿಸುವ ಪರಿಣತಿಯನ್ನು ಗಳಿಸಲು ಇದೊಂದು ಸದವಕಾಶವಾಗಿದೆ.

ಈಜಿಪ್ಟ್ ಧ್ಯಾನ ಯಾತ್ರೆಗಳು ಮತ್ತು ಕರ್ನಾಟಕದ ಎಲ್ಲೆಡೆ ಧ್ಯಾನ ತರಗತಿಗಳು ನಿರಂತರವಾಗಿ ನಡೆದಿವೆ. ಅವುಗಳ ವರದಿಗಳು ಈ ಸಂಚಿಕೆಯಲ್ಲಿವೆ. ಸುಭಾಷ್ ಪತ್ರೀಜಿಯವರ 'ಜೀಸಸ್ ಕ್ರೈಸ್ಟ್' ಡಿಸೆಂಬರ್ ತಿಂಗಳ ಕ್ರಿಸ್‌ಮಸ್ ವಿಶೇಷ ಲೇಖನವಾಗಿ ಇಲ್ಲಿದೆ. ಶ್ರೀಶೈಲಂನಲ್ಲಿ ಲಿಂಗೈಕ್ಯಳಾದ 'ಕರ್ನಾಟಕದ ವಚನಕಾರ್ತಿ ಅಕ್ಕಮಹಾದೇವಿ' ಕುರಿತ ಲೇಖನ ಸಾಂದರ್ಭಿಕವಾಗಿ ಮೂಡಿಬಂದಿದೆ. ಎಂದಿನಂತೆ, ಕುತೂಹಲಭರಿತ ಆಧ್ಯಾತ್ಮಿಕ ಲೇಖನಗಳ ಸಮೃದ್ಧ ಸಂಚಿಕೆ ನಿಮ್ಮ ಕೈಲಿದೆ. ಓದಿ ಆನಂದಿಸಿರಿ. ವಂದನೆಗಳು.

ಎ.ಸತ್ಯನಾರಾಯಣ

ವಿಳಾಸ: ನಂ.958, 2ಜಿ ಕ್ರಾಸ್, 1ನೇ ಬ್ಲಾಕ್
ಹೆಚ್.ಆರ್.ಬಿ.ಆರ್. ಬಡಾವಣೆ
ಕಲ್ಯಾಣನಗರ, ಬೆಂಗಳೂರು 560 043
ದೂ: 080-25427145, 9448883872
ಇ-ಮೇಯ್ಲ್: sathyaasn@gmail.com

## ಭಾರತೀಯ ಆಧ್ಯಾತ್ಮಿಕ ವಿಜ್ಞಾನಿಗಳ ಒಕ್ಕೂಟ

(IFSS-Indian Federation of Spiritual Scientists)

ಆಧ್ಯಾತ್ಮಿಕ ಜ್ಞಾನೋದಯದ ಮೂಲಕ ಶಾಂತಿ ಹಾಗು ಸಮೃದ್ಧಿಯ ಭಾರತ. 2016 ರ ಹೊತ್ತಿಗೆ ಪ್ರತಿಯೊಬ್ಬ ಭಾರತೀಯನ ಆಧ್ಯಾತ್ಮಿಕ ಏಳಿಗೆ ಹಾಗೂ ವಿಸ್ತರಣೆಯ ಮೂಲಕ ಭಾರತದ ಪ್ರಜಾಪ್ರಭುತ್ವದ ಆಧ್ಯಾತ್ಮಿಕ ಪರಿಪೂರ್ಣತೆ.

ಈಗ ಬಂದಿದೆ ಐಕ್ಯತೆಯ ಸಮಯ. ಆಧ್ಯಾತ್ಮಿಕ ವಿಜ್ಞಾನದಲ್ಲಿ ಆಸಕ್ತಿ ಉಳ್ಳವರಿಗೆ ಒಗ್ಗಟ್ಟಿನಿಂದ ಒಂದಾಗಲು ನೆಚ್ಚಿನ ತಾಣವೊಂದು ನಮ್ಮೆಲ್ಲರಿಗಾಗಿ ರಂಗ ಸಜ್ಜಿಕೆಯಾಗಿದೆ. ತನ್ಮೂಲಕ ಸೇವೆಯನ್ನು ಪಡೆಯಲು ಸಿದ್ಧವಾಗಿದೆ.

ಬಲು ಶಕ್ತಿಯುತವಾದ, ಪ್ರಭಾವಿತವಾದ ಹೆಜ್ಜೆಯೊಂದನ್ನು ಈ ದಿಕ್ಕಿನಲ್ಲಿ ಹಾಕಬೇಕಾದರೆ, ಎಲ್ಲಾ ಆಧ್ಯಾತ್ಮಿಕ ವಿಜ್ಞಾನಿಗಳು, ಜ್ಞಾನಿಗಳು ಪ್ರತ್ಯೇಕವಾಗಿ ನಮ್ಮ ಭಾರತದಲ್ಲಿ ಉದಯಿಸಿರುವ ಆಧ್ಯಾತ್ಮಿಕ ಸೂರ್ಯರು, ಈಗ ಒಮ್ಮತದಿಂದ ತಮ್ಮ ಜ್ಞಾನದ ಬೆಳಕನ್ನು ಆಧ್ಯಾತ್ಮಿಕ ಪರಿವರ್ತನೆಯ ನಿಟ್ಟಿನಲ್ಲಿ ಹರಿಸಬೇಕಾಗಿದೆ.

ಇಂತಹ ಆಧ್ಯಾತ್ಮಿಕ ಪ್ರವಾಹದ ರಭಸದಿಂದ ನಮ್ಮೆಲ್ಲರ ಸಾಮಾಜಿಕ ನಡವಳಿಕೆಯಲ್ಲಿ ಅಪಾರವಾದ ಪ್ರಗತಿಯನ್ನು ಕಾಣಬಹುದು. ಹಾಗೆಯೆ, ಭಾರತೀಯ ಸಮಾಜ ಶಾಸ್ತ್ರದಲ್ಲಿ ನಮಗೆ ತಿಳಿದಿರುವ LEGISLATIVE, EXECUTIVE, JUDICIAL and MEDIA ಅಂದರೆ ನಮ್ಮ ಪ್ರಜಾತಂತ್ರದ ಬುನಾದಿಯಾಗಿರುವ ನಾಲ್ಕು ಅಂಶಗಳಾದ ನ್ಯಾಯಾಂಗ, ಕಾರ್ಯಾಂಗ, ಶಾಸಕಾಂಗ ಹಾಗೂ ಮಾಹಿತಿ ತಂತ್ರಜ್ಞಾನದ ಕ್ಷೇತ್ರಗಳಲ್ಲಿ ಉನ್ನತಿಯೆಂಬುದು ಶತಸಿದ್ಧ.

ಇದರ ಪರಿಣಾಮವಾಗಿ ನಮ್ಮ ದೇಶಕ್ಕೆ ಸಧ್ಯದಲ್ಲಿ ತುಂಬಾ ಕಾಳಜಿವಹಿಸಬೇಕಾದ ಕ್ಷೇತ್ರಗಳಾದ ಪ್ರಾಥಮಿಕ ಶಿಕ್ಷಣ (primary education) ಆರೋಗ್ಯ ರಕ್ಷಣೆ (health care), ಮಾನವ ಸಂಪನ್ಮೂಲ ಅಭಿವೃದ್ಧಿ (human resource development), ದಕ್ಷ ಆಡಳಿತ (good governance), ನೈಸರ್ಗಿಕ ವ್ಯವಸಾಯ (organic agriculture), ಹಾಗೂ ಪರಿಸರ ಸಂರಕ್ಷಣೆಯ (eco management) ವಿಷಯಗಳಲ್ಲಿ ಪರಿಪೂರ್ಣತೆಯನ್ನು ಸಾಧಿಸಬಹುದು.

IFSSನ ಮುಖ್ಯ ಉದ್ದೇಶವೇನೆಂದರೆ, ಭಾರತದ ಪ್ರತಿಯೊಬ್ಬರೂ, ಪ್ರತಿಯೊಂದು ಆಧ್ಯಾತ್ಮಿಕ ಶಿಕ್ಷಣ ಸಂಸ್ಥೆಯು ಹಾಗೂ ಆಧ್ಯಾತ್ಮಿಕ ವಿಜ್ಞಾನದಲ್ಲಿ ಸಂಶೋಧನೆ ನಡೆಸುತ್ತಿರುವ ಎಲ್ಲಾ ಸಂಸ್ಥೆಗಳು ಒಂದಾಗಿ ಆಧ್ಯಾತ್ಮಿಕ ಏಳಿಗೆಗಾಗಿ ಶ್ರಮಿಸುವುದೇ ಆಗಿದೆ.

-ಬ್ರಹ್ಮರ್ಷಿ ಪತ್ರೀಜಿ.



## ಆನಾಪಾನಸತಿ ಧ್ಯಾನ



**ಧ್ಯಾನದ ವಿಧಾನ :** ಸುಖಾಸನದಲ್ಲಿ ಹಾಯಾಗಿ ಕುಳಿತುಕೊಂಡು, ಎರಡೂ ಕೈ ಬೆರಳುಗಳನ್ನು ಪರಸ್ಪರ ಜೋಡಿಸಿಕೊಂಡು, ಕಣ್ಣೆರಡೂ ಮುಚ್ಚಿ ಸಹಜವಾಗಿ ನಡೆಯುತ್ತಿರುವ ಉಸಿರಾಟವನ್ನು ಗಮನಿಸುತ್ತಿರಬೇಕು. ಯಾವ ಮಂತ್ರ, ಜಪ ಅಥವಾ ನಾಮಸ್ಮರಣೆ ಇರಬಾರದು. ಯಾವ ದೈವೀಕಲ್ಪನೆಗಳು ಅಗತ್ಯವಿಲ್ಲ, ಸಹಜವಾಗಿಯೇ ನಡೆಯುತ್ತಿರುವ ಉಸಿರಾಟವನ್ನು ಆಹ್ಲಾದದಿಂದ ಗಮನಿಸುತ್ತಿರಿ ಅಷ್ಟೆ. ಸಹಜವಾದ ಉಸಿರಾಟದ ಮೇಲೆಯೇ ಗಮನವಿಡುತ್ತಿದ್ದರೆ, ಕ್ರಮೇಣ ಆಲೋಚನಾ ರಹಿತ ಸ್ಥಿತಿ ಉಂಟಾಗುತ್ತದೆ. ಇದೇ ಧ್ಯಾನ ಸ್ಥಿತಿ. ಈ ಧ್ಯಾನ ಸ್ಥಿತಿಯಲ್ಲಿ ಅಪಾರವಾದ ವಿಶ್ವಮಯ ಪ್ರಾಣಶಕ್ತಿ (ಕಾಸ್ಮಿಕ್ ಎನರ್ಜಿ) ಶರೀರದಲ್ಲಿ ಪ್ರವೇಶಿಸಿ, ನಾಡಿಮಂಡಲ ಶುದ್ಧಿಯಾಗಿ ಅದ್ಭುತವಾದ ಆರೋಗ್ಯ ದೊರಕುತ್ತದೆ. ಪ್ರತಿದಿನ ನಿಯಮಬದ್ಧವಾಗಿ ಧ್ಯಾನ ಮಾಡುವುದರಿಂದ, ದೇಹದಲ್ಲಿ ವಿಶ್ವಪ್ರಾಣಶಕ್ತಿಯ ಮಟ್ಟ ಹೆಚ್ಚಿ ಸುಪ್ತಚೇತನಗಳು ಜಾಗೃತಿಯಾಗುತ್ತವೆ. ಕ್ರಮೇಣ ದಿವ್ಯಚಕ್ಷು ಉತ್ತೇಜನಗೊಳ್ಳುತ್ತದೆ. ಪಿರಮಿಡ್ ಶಕ್ತಿ ಲಭ್ಯವಿದ್ದೆಡೆ, ಪಿರಮಿಡ್‌ಗಳನ್ನು ಬಳಸಿ ಧ್ಯಾನ ಮಾಡಿ, ಧ್ಯಾನ ಸ್ಥಿತಿ ಬೇಗ ಬರುತ್ತದೆ; ಧ್ಯಾನ ಶಕ್ತಿ ಅಪಾರವಾಗಿ ಹೆಚ್ಚುತ್ತದೆ.

### ಧ್ಯಾನದ ಲಾಭಗಳು



- ★ ಸಂಪೂರ್ಣ ಆರೋಗ್ಯ
- ★ ನೆನಪಿನ ಶಕ್ತಿ ವೃದ್ಧಿ
- ★ ಮೂರನೇ ಕಣ್ಣು ಉತ್ತೇಜನ
- ★ ಆತ್ಮ ವಿಶ್ವಾಸ
- ★ ಬುದ್ಧಿ ಸೂಕ್ಷ್ಮತೆ
- ★ ಜೀವನದ ಗುರಿಯ ಸ್ಪಷ್ಟತೆ
- ★ ಆಧ್ಯಾತ್ಮಿಕ ಜ್ಞಾನ
- ★ ಏಕಾಗ್ರತೆಯ ಶಕ್ತಿ
- ★ ಮಾನಸಿಕ ಶಾಂತಿ



## ಏಕತಾ ಧ್ಯಾನ

''ಏಕತಾ ಧ್ಯಾನ'' ಎಂಬುದು ಒಂದು ''ಸಾಮೂಹಿಕ ಧ್ಯಾನ ಗೋಷ್ಠಿ''. ನಾವು ಎಲ್ಲಿದ್ದರೆ ಅಲ್ಲೇ.
ಒಂದೇ ಸಮಯದಲ್ಲಿ ಎಲ್ಲರೂ ಕುಳಿತು ಮಾಡುವ ಧ್ಯಾನವು ಎಲ್ಲರನ್ನೂ ಒಗ್ಗೂಡಿಸುತ್ತದೆ.

### "ಪ್ರತಿ ಭಾನುವಾರ ಬೆಳಗ್ಗೆ 6 ಗಂಟೆಯಿಂದ 7 ಗಂಟೆಯವರೆಗೆ"

ಒಂದು ಗಂಟೆಯ ಸಮಯವನ್ನು ಈ ಶ್ರೇಷ್ಠ 'ಏಕತಾ ಸಂಪರ್ಕ'ಕ್ಕಾಗಿ ಆಯ್ಕೆ ಮಾಡಲಾಗಿದೆ.
ಇದು ಜೂನ್1, 2008 ರಿಂದ ಆರಂಭಗೊಂಡು ಡಿಸೆಂಬರ್ 2012ರ ಅಂತ್ಯಕ್ಕೆ ಕೊನೆಗೊಳ್ಳುತ್ತದೆ.

ಶ್ರೇಷ್ಠ ಏಕತಾ ಭಾವದೊಂದಿಗೆ ''ಧ್ಯಾನ ಜಗತ್''ನ್ನು ಸಾಧಿಸೋಣ

### 2012ರ ಹೊತ್ತಿಗೆ ಇಡೀ ಜಗತ್ತನ್ನು ಆಧ್ಯಾತ್ಮೀಕರಿಸೋಣ !

''ಏಕತಾ ಧ್ಯಾನ ಯೋಜನೆ''ಯು ಇಡೀ ಜಗತ್ತಿನಾದ್ಯಂತ ವಿಸ್ತರಿಸಬೇಕು. ವಿಶ್ವಪ್ರಜ್ಞೆ ಮತ್ತು ಜಗತ್ತಿನ ಸಮನ್ವಯವನ್ನು
ಸಾಧ್ಯವಾದಷ್ಟು ಶೀಘ್ರವಾಗಿ ಜಗತ್ತಿನಾದ್ಯಂತ ಹಸರಿಸುವ ಘನ ಉದ್ದೇಶಕ್ಕಾಗಿ ನಾವೆಲ್ಲರೂ ಶ್ರಮಿಸೋಣ.
ಇಡೀ ಅಸ್ತಿತ್ವದ ಜೊತೆಯಲ್ಲಿ, ನೀವೂ ಸಹ ಇರುವಿರಿ ಎಂದು ನೀವು ಭಾವಿಸಿದರೆ,
ಈ ಏಕತಾ ಧ್ಯಾನದಲ್ಲಿ ನೀವೂ ಸಹ ಒಬ್ಬ ಅಭ್ಯರ್ಥಿಯೇ ಹೌದು !

*'' ನಿಮ್ಮ ಉಸಿರಿನೊಂದಿಗೇ ಇರಿ ''*

# ಶೂನ್ಯ ಮನಸ್ಸು



ಯಾವುದೇ ಒಂದು ಕೆಲಸದಲ್ಲಿ ಏಕಾಗ್ರತೆಯನ್ನು ವಹಿಸಿದಾಗ ಆ ಕೆಲಸದಲ್ಲಿ ನಮ್ಮ ಕಾರ್ಯಕೌಶಲ್ಯತೆ ಹೆಚ್ಚಾಗುತ್ತದೆ. ಇದಕ್ಕೆ ಸುಸ್ಥಿರವಾದ ಮನಸ್ಸು ತುಂಬಾ ಸಹಾಯಕಾರಿಯಾಗುತ್ತದೆ. ಸುಸ್ಥಿರ ಮನಸ್ಸೆಂದರೆ, ಆರೋಗ್ಯವಂತ ಮನಸ್ಸು. ನಾವು ಮಾಡುವ ಕೆಲಸದಲ್ಲಿ ಹೆಚ್ಚು ಹೆಚ್ಚು ಏಕಾಗ್ರತೆ ಹಾಗೂ ಶ್ರದ್ಧೆಯನ್ನು ವಹಿಸಿದಾಗ ನಮ್ಮ ಮನಸ್ಸು ಸಧೃಡವಾಗಿಯೂ, ಕ್ರಿಯಾತ್ಮಕವಾಗಿಯೂ ರೂಪುಗೊಳ್ಳುತ್ತದೆ. ಮಾನಸಿಕ ಒತ್ತಡ ಕಡಿಮೆಯಾಗಿ ಉಲ್ಲಾಸಭರಿತರಾಗುತ್ತೇವೆ. ಮನಸ್ಸಿಗೆ ವಿಶ್ರಾಂತಿ ಒದಗಿಸಿದಷ್ಟೂ ಅದು ಸ್ಥಿರವಾಗುತ್ತಾ, ಹಗುರವಾಗುತ್ತಾ ಇರುತ್ತದೆ. ಅದರ ಪರಿಣಾಮದಿಂದಾಗಿ, ನಮ್ಮ ದೇಹ ಶಕ್ತಿಯುತವಾಗಿಯೂ ತೇಜೋಮಯವಾಗಿಯೂ ತಯಾರಾಗುತ್ತದೆ. ಮನಸ್ಸಿನ ತಳಮಳ ಕ್ರಮೇಣ ಮಾಯವಾಗಿ, ಮನಸ್ಸು ಬರಿದಾಗುತ್ತದೆ. ಆಲೋಚನೆಗಳಿಲ್ಲದ ಅಂತಹ ಬರಿದಾದ ಮನಸ್ಸು ಸಮೃದ್ಧಿಯ ಒಡಲಾಗುತ್ತದೆ. ಮನಸ್ಸಿಗೆ ಒಂದು ಉತ್ತಮವಾದ ಕೆಲಸವೆಂದರೆ, ಶ್ವಾಸವನ್ನು ಗಮನಿಸುವುದು. ಶ್ವಾಸವನ್ನು ಗಮನಿಸುವ ಕಾರ್ಯದಲ್ಲಿ ಮನಸ್ಸು ಮಗ್ನವಾದಾಗ ಕೆಲವು ಅದ್ಭುತಗಳು ಸಂಭವಿಸುತ್ತವೆ. ಮನಸ್ಸಿಗೆ ವಿಶ್ರಾಂತಿ ದೊರೆತು, ಸದಾ ಆಲೋಚನೆಗಳಿಂದ ಗೊಂದಲಮಯವಾಗಿರುವ ಮನಸ್ಸು ಶಾಂತಿಯನ್ನು ಪಡೆಯುತ್ತದೆ. ಶ್ವಾಸವನ್ನು ಗಮನಿಸುವ ಪ್ರಕ್ರಿಯೆಯನ್ನು ಮುಂದುವರೆಸಿದಾಗ, ಅಂತರಾಳದಲ್ಲಿ ಪ್ರಶಾಂತತೆಯು ಪ್ರವಹಿಸುತ್ತದೆ. ಈ ರೀತಿಯಾಗಿ ಮನಸ್ಸು ಬರಿದಾದಾಗ, ನಮ್ಮೊಳಗೆ ಅಪಾರವಾದ ವಿಶ್ವಶಕ್ತಿಯು ಹರಿಯುತ್ತದೆ. ಮನಸ್ಸು ಹೆಚ್ಚು ಹೆಚ್ಚು ಶೂನ್ಯವಾದಷ್ಟೂ ಇನ್ನೂ ಹೆಚ್ಚು ವಿಶ್ವಶಕ್ತಿಯು ನಮ್ಮೊಳಕ್ಕೆ ಹರಿಯುತ್ತದೆ. ಆಹಾರ ಹಾಗೂ ನಿದ್ರೆಯಲ್ಲಿ ಸಿಗುವ ಶಕ್ತಿಗೂ, ಈ ವಿಶ್ವಶಕ್ತಿಗೂ ಯಾವ ವ್ಯತ್ಯಾಸವೂ ಇಲ್ಲ. ಆದರೆ, ಮನಸ್ಸು ಶೂನ್ಯವಾದಾಗ ಸಿಗುವ ವಿಶ್ವಶಕ್ತಿಯ ಪ್ರಮಾಣವು ನೂರು ಪಟ್ಟು ಹೆಚ್ಚಾಗಿರುತ್ತದೆ. ಈ ರೀತಿಯಾಗಿ ವಿಶ್ವಶಕ್ತಿಯ ಪ್ರವಾಹದಿಂದ ತುಂಬಿಕೊಂಡ ನಮ್ಮಲ್ಲಿ ಹಲವು ಅದ್ಭುತ ಬದಲಾವಣೆಗಳನ್ನು ಕಾಣಬಹುದು. ಮೊದಲನೆಯದಾಗಿ ನಮ್ಮ ಮೂರನೆಯ ಕಣ್ಣು ಉತ್ತೇಜಿತವಾಗುತ್ತದೆ. ಇದಕ್ಕೆ ಇನ್ನೊಂದು ಹೆಸರು "ದಿವ್ಯ ಚಕ್ಷು" ಅಥವಾ "ದಿವ್ಯ ದೃಷ್ಟಿ". ಪ್ರಾಮಾಣಿಕವಾಗಿ ಧ್ಯಾನ ಮಾಡಿದರೆ, ಮೊದ ಮೊದಲು ಸುಂದರವಾದ ಪ್ರಕೃತಿಯು ಈ ದಿವ್ಯ ಚಕ್ಷುವಿನ ಮೂಲಕ ಕಾಣಿಸಿಕೊಳ್ಳುತ್ತದೆ. ಎಂದೂ ಕಂಡರಿಯದ ಆ ದಿವ್ಯ ನೋಟಗಳು ಅನುಭವಿಸಲು ಬಲು ರೋಮಾಂಚಕ. ಆ ನೋಟಗಳು ನಿಜಸ್ಥಿತಿಯಲ್ಲಿ ವಾಸ್ತವಗಳೇ ಹೌದು. ಆ ದೃಶ್ಯಗಳು ಸುಳ್ಳಲ್ಲ. ನಾವು ಸಜೀವವಾಗಿ ಈ ಭೂಲೋಕದಲ್ಲಿ ನೋಡುವ ದೃಶ್ಯಗಳು ಹೇಗೆ ವಾಸ್ತವವೋ, ಹಾಗೆಯೇ, "ದಿವ್ಯದೃಷ್ಟಿ"ಯ ಮೂಲಕ ಕಾಣಸಿಗುವ ದೃಶ್ಯಗಳು ಕೂಡಾ ವಾಸ್ತವವೇ. ವ್ಯತ್ಯಾಸವೇನೆಂದರೆ, ಅವು ಬೇರೆಯ ಪ್ರಪಂಚಗಳಿಗೆ ಅನ್ವಯಿಸುವ ದೃಶ್ಯಗಳು. ಹಲವು ಬಾರಿ ಈ ಭೂಲೋಕದಲ್ಲಿ ನಾವೆಂದೂ ಕಂಡಿರದ ಪ್ರದೇಶಗಳು ಕಾಣಿಸಿಕೊಳ್ಳುತ್ತವೆ. ಹಾಗೆಯೇ, ಬೇರೆ ಪ್ರಪಂಚಕ್ಕೆ ಸಂಬಂಧಿಸಿದ ಪ್ರದೇಶಗಳು ಕಾಣಿಸಿದಾಗ ಆಶ್ಚರ್ಯವಾಗುತ್ತದೆ. ಬೇರೆ ಪ್ರಪಂಚಗಳು ಇರಲು ಸಾಧ್ಯವೆ? ಈ ಸೃಷ್ಟಿಯಲ್ಲಿ ಲೆಕ್ಕವಿಲ್ಲದಷ್ಟು ಲೋಕಗಳಿವೆ. ಆ ಲೋಕಗಳ ಸೃಷ್ಟಿಯು ಬೇರೆ ಬಗೆಯ ಪುನರಾವರ್ತನೆಯಿಂದ ಉಂಟಾದವು ಇದಕ್ಕೆ Alternate Frequency Realities ಎನ್ನುತ್ತೇವೆ. ಅಂದರೆ, "ಪರ್ಯಾಯ ತರಂಗಾಂತರ ವಾಸ್ತವತೆಗಳು" ಎನ್ನಬಹುದು. ಈ Alternate Frequency ನಮಗೆ ತಿಳಿದಿರುವ ಸತ್ಯಾಂಶಗಳಿಗೆ ಹೋಲಿಸಿದರೆ ಭಿನ್ನವಾಗಿರುತ್ತವೆ. ಅಂದರೆ, ಮಹಾಚೈತನ್ಯವು ತನ್ನನ್ನು ತಾನು ಪ್ರಕಟಗೊಳಿಸುವಾಗ ನಾನಾ ಬಗೆಯ ರೂಪಗಳಲ್ಲಿ ವ್ಯಕ್ತವಾಗಿದೆ. ಆ ಚೈತನ್ಯಶಕ್ತಿಯು ಪ್ರಸಾರಗೊಂಡು ಹಲವಾರು ರೂಪಗಳಲ್ಲಿ ವ್ಯಕ್ತಪಡಿಸುವುದನ್ನು ತರಂಗಾಂತರ ಎಂದು ಹೇಳಬಹುದು. ಮಾತಿನ ಮೂಲಕ ಶಬ್ದ ತರಂಗಗಳು ಒಂದೆಡೆಯಿಂದ ಇನ್ನೊಬ್ಬರ ಕಿವಿಗೆ ತಾಗಲು, ಆ ಶಬ್ದ ರಚನೆಯಲ್ಲಿ ಅಡಗಿರುವ ಭಾವನೆಗಳು ನಮಗೆ ಅರ್ಥವಾಗುತ್ತದೆ. ಇದೇ ರೀತಿ ಮಹಾಚೈತನ್ಯವು ಪ್ರಕಟಗೊಂಡಾಗ, ಬಗೆಬಗೆಯ ತರಂಗಾಂತರಗಳು ಬಿಡುಗಡೆಯಾಗಿ ಹಲವಾರು ಪ್ರಪಂಚಗಳು ಸೃಷ್ಟಿಯಾಗಿವೆ. ಅದರಲ್ಲಿ ನಮ್ಮ ಭೂಲೋಕವೂ ಸಹ ಒಂದು. ಆ ಮಹಾ ಚೈತನ್ಯವು ತನ್ನನ್ನು ತಾನೇ ದರ್ಶಿಸಿಕೊಳ್ಳಲು ಜೀವಕೋಟಿಯನ್ನೇ ಸೃಷ್ಟಿಸಿದೆ. ನಮ್ಮನ್ನು ಒಳಗೊಂಡು ಈ ಎಲ್ಲಾ ಜೀವರಾಶಿಗಳೂ ಒಂದೇ ಜೀವಶಕ್ತಿಯ (Life Force) ಆಧಾರದ ಮೇಲೆ ಬಾಳ್ವೆ ನಡೆಸುತ್ತವೆ. ಈ ಜೀವಶಕ್ತಿಯು ನಮಗೆ ತಿಳಿದಿರುವ ಒಂದು ಬಗೆಯ ತರಂಗಾಂತರ (Frequency) ಲೆಕ್ಕವಿಲ್ಲದ ತರಂಗಾಂತರಗಳಲ್ಲಿ ನಾವು ಕೂಡಾ ಒಂದು ರೀತಿಯಲ್ಲಿ ಭಾಗವಹಿಸುತ್ತಿದ್ದೇವೆ. ಜನಿಸುವುದರಿಂದ ಹಾಗೂ



ಗತಿಸುವುದರಿಂದ ಹೇಗೆ ನಮಗೆ ಈ ಜಗತ್ ಆಗಿದೆಯೋ, ಹಾಗೆಯೇ, ಊಹೆಗೆ ಎಟುಕುವಷ್ಟು ವಿವಿಧ ಬಗೆಯ ವಿಶ್ವಗಳು ಪ್ರಸಾರಗೊಳ್ಳುತ್ತಿವೆ. ಈ ಅನಂತಸಾಗರದಲ್ಲಿ ಪ್ರತಿಯೊಂದೂ ಪ್ರಪಂಚವು ವಿಶೇಷವಾದ ಭಾವನೆಗಳಿಂದ ಪ್ರಕಂಪಿಸುತ್ತಿರುತ್ತವೆ. ಇದರ ಅರಿವು ನಮಗೀಗ ಆಗುತ್ತಿದೆ. ಆದ್ದರಿಂದ, ನಾವು ಆ ಪ್ರಜ್ಞೆಯ ಒಂದು ತುಣುಕು ಎಂಬುದನ್ನು ನೆನಪಿನಲ್ಲಿಡಬೇಕು.

ಸರಿಯಾದ ಶಿಕ್ಷಣಾ ವ್ಯವಸ್ಥೆ ಈಗ ತಾನೇ ರೂಪುಗೊಳ್ಳುತ್ತಿದೆ. ಇದಕ್ಕೆ ಮುಂಚೆ ನಾವು ಕೇವಲ ದೇಹವೆಂದು ನಮಗೆ ನಾವೇ ಹಲವು ನಿಬಂಧನೆಗಳನ್ನು ಹಾಕಿಕೊಂಡಿರುತ್ತೇವೆ. ಇದರಿಂದ ನಮ್ಮ ಆಧ್ಯಾತ್ಮಿಕ ಪ್ರಗತಿಯು ಕುಂಠಿತವಾಗಿದೆ. ನಾವು ತಿಳಿದಿರುವ ವಾಸ್ತವವೊಂದೇ ಸತ್ಯವೆಂದು ನಂಬಿದ್ದೇವೆ. ಈ ಎಲ್ಲೆಗಳನ್ನು ದಾಟಿ ನಮ್ಮ ನಿಜ ಸ್ವರೂಪ ದರ್ಶನ ಮಾಡಬೇಕಾದರೆ ಧ್ಯಾನವೊಂದೇ ಮಾರ್ಗ. ಧ್ಯಾನದಿಂದ ನಮ್ಮ ಕಲ್ಪನೆಯ ಎಲ್ಲೆಗಳಿಂದ ಬಿಡುಗಡೆ ಹೊಂದಿ, ಈ ಸುವ್ಯವಸ್ಥಿತ ವಿಶ್ವದ ಅರಿವು ನಮ್ಮದಾಗುತ್ತದೆ. ಇದೊಂದು ಭವ್ಯ ಅನುಭವ. ಈ ದಿವ್ಯತೆಯನ್ನು ನಾವು ಜ್ಞಾನೋದಯವೆನ್ನುತ್ತೇವೆ. ಈ ರೀತಿ ಹಲವು ಬಗೆಯ ಸತ್ಯಾಂಶಗಳನ್ನು ದರ್ಶಿಸಿದಾಗ ನಮ್ಮ ಪ್ರಜ್ಞೆಯು ವಿಸ್ತಾರಗೊಳ್ಳುತ್ತದೆ. ಇದರಿಂದ ನಮ್ಮ ಪರಿಚಯವನ್ನು ನಾವೇ ಮಾಡಿಕೊಂಡು ನಮ್ಮ ನಿಜ ಸ್ವರೂಪದ ಅವಗಾಹನೆಯುಂಟಾಗುತ್ತದೆ.

## ಆಂತರಿಕ ಮೌನ

ನಮ್ಮ ಪರಿಚಯವನ್ನು ಯಾರಾದರೂ ಕೇಳಿದಲ್ಲಿ, ನಮ್ಮ ಹೆಸರು, ವಿಳಾಸ, ಹುದ್ದೆ, ಆರ್ಥಿಕ ಅಂತಸ್ತು, ನಮ್ಮ ಸಾಧನೆ ಇತ್ಯಾದಿಗಳನ್ನು ಮಾತ್ರವೆ ನಮಗೆ ಹೇಳಲು ಸಾಧ್ಯ. ಇವಿಷ್ಟಕ್ಕೆ ಮಾತ್ರ ನಾವು ಸೀಮಿತವೆಂದು ನಂಬಿದ್ದೇವೆ. ಇದೇ ರೀತಿ ನಮ್ಮ ಆತ್ಮವನ್ನು ಕೂಡಾ ಸೀಮಿತವಾಗಿ ಕೃತಿಗೊಳಿಸಿಕೊಂಡಿದ್ದೇವೆ. ನಮ್ಮ ಆತ್ಮದ ಬಲ ಹಾಗೂ ಅದರ ವಿಸ್ತಾರ ಬಣ್ಣಿಸಲು ಅಸಾಧ್ಯ. ಅದನ್ನು ಅನುಭವಕ್ಕೆ ಮಾತ್ರ ತಂದುಕೊಳ್ಳಬಹುದು. ಆದರೆ, ವ್ಯಕ್ತಪಡಿಸಲು ಕೇವಲ ಪ್ರಯತ್ನಿಸಬಹುದಷ್ಟೆ. ನಮ್ಮ ಶ್ವಾಸದ ಜೊತೆ ಒಂದಾಗಿ ಶೃತಿಬದ್ಧವಾಗಿ, ಲಯಬದ್ಧವಾಗಿ ಅದನ್ನು ಗಮನಿಸುತ್ತಿದ್ದರೆ ಏನಾಗುತ್ತದೆ?

ನಾವೊಂದು ಹೊಸ ಆಂತರಿಕ ಮೌನವನ್ನು ಸಂಧಿಸುತ್ತೇವೆ. ಆ ನಿಶ್ಶಬ್ದತೆ ಬಲು ಆನಂದದಾಯಕ. ಹಾಗೆ ನಿಶ್ಚಿಂತೆಯಿಂದಿರುವುದೇ ಧ್ಯಾನ. ಕಣ್ಣು ಮುಚ್ಚಿ ಶ್ವಾಸವನ್ನು ದೀರ್ಘಕಾಲದವರೆಗೆ ಗಮನಿಸಿದಲ್ಲಿ, ನಾವು ಅದರೊಂದಿಗೆ ಏಕತೆಯನ್ನು ಸಾಧಿಸುತ್ತೇವೆ. ಇದಕ್ಕೆ ಅಪಾರವಾದ ತಾಳ್ಮೆಯು ಬೇಕು. ಮನದಲ್ಲಿ ಏನೇ ಗೊಂದಲ ಉಂಟಾದರೂ ಕಣ್ಣುಗಳನ್ನು ಮಾತ್ರ ತೆರೆಯಬಾರದು. ಹಲವಾರು ಆಲೋಚನೆಗಳ ಪರಂಪರೆಯು ತೆರೆದುಕೊಂಡರೂ, ಅದಕ್ಕೆ ಸೋಲದೆ ಗಮನವನ್ನು ಶ್ವಾಸದ ಮೇಲೆ ಇಡಬೇಕು. ಮನಸ್ಸು ಹೊರಗಡೆ ಹೋಗಲು ಸಿದ್ಧವಾದಾಗಲೆಲ್ಲ, ನಮ್ಮ ಗಮನವನ್ನು ಶ್ವಾಸದ ಮೇಲೆಯೇ ಇಡಬೇಕು. ತ್ವರಿತಕಾಲದಲ್ಲಿ ಶ್ವಾಸದ ಪ್ರಮಾಣವು ಸಣ್ಣದಾಗುತ್ತ ನಂತರ, ಕೇವಲ ಮೂಗಿನ ಹೊಳ್ಳೆಯಲ್ಲಿ ಮಾತ್ರ ಶ್ವಾಸವಿರುವ ಅನುಭವ ಆಗುತ್ತದೆ. ಕ್ರಮೇಣ ಎಲ್ಲ ಗೊಂದಲಗಳು, ಆತಂಕ, ಒತ್ತಡಗಳು ಇಲ್ಲವಾಗಿ ಮನಸ್ಸು ಪ್ರಶಾಂತವಾಗುತ್ತದೆ. ಆ



ಸ್ಥಿತಿಯಲ್ಲಿ ಅನುಭವಕ್ಕೆ ಸಿಗುವ ಮೌನ ಬಲು ಚೆಂದ. ಎಂದೂ ಕಂಡರಿಯದ ಸ್ತಬ್ಧ, ನಿಶ್ಚಲ, ನಿರ್ಮಲ ಮೌನ. ಹೊರಗಿನ ಶಬ್ದಗಳು ಕೂಡ ಕೇಳಿಸದು.

## ಆಂತರಿಕ ಇಂದ್ರಿಯಗಳು

ಈ ಸಮಾಧಿ ಸ್ಥಿತಿಯಲ್ಲಿ ನಮ್ಮ ಎಲ್ಲಾ ಇಂದ್ರಿಯಗಳು ಅಂತರ್ಮುಖಿವಾಗಲು ಆರಂಭಿಸುತ್ತವೆ. ಹೊರಪ್ರಪಂಚವನ್ನು ಅರಿಯುವ ಈ ಇಂದ್ರಿಯಗಳು, ಈಗ ಒಳ ಪ್ರಪಂಚವನ್ನು ಹೊಕ್ಕು ಜ್ಞಾನೇಂದ್ರಿಗಳಾಗುತ್ತವೆ. ಆಗ ನಮ್ಮ ಅಂತರಂಗದ ಪ್ರಪಂಚಗಳನ್ನು ಗ್ರಹಿಸುತ್ತೇವೆ. ಅಂತರಿಕಪ್ರಪಂಚಗಳಿಗೂ ಕೂಡ ಅವುಗಳದ್ದೇ ಆದ ಬೇರೆ ಬಗೆಯ ತರಂಗಾಂತರಗಳು ಇರುತ್ತವೆ. (Frequency of the inner world) ನಮ್ಮ ಇಂದ್ರಿಯಗಳನ್ನು ಉತ್ತೇಜಿಸಿ, ಜ್ಞಾನೇಂದ್ರಿಯಗಳಾಗಿ ಮಾರ್ಪಡಿಸಿ, ಅಂತರಿಕಪ್ರಪಂಚಗಳಲ್ಲಿ ಪ್ರಯಾಣಿಸಿ, ಅಲ್ಲಿನ ಎಷ್ಟೋ ಮಂದಿ ಗುರುಗಳನ್ನು ಸಂದರ್ಶಿಸಿ ಜ್ಞಾನ ಪಡೆಯುವುದೇ ಧ್ಯಾನದ ಮುಖ್ಯ ಉದ್ದೇಶ.

ಆಧ್ಯಾತ್ಮಿಕ ಜ್ಞಾನವು ಆಂತರಿಕಪ್ರಪಂಚದ ಗುರುಗಳಿಂದಲೇ ಲಭ್ಯ. ಧ್ಯಾನಮಾರ್ಗವು ಅದಕ್ಕಾಗಿಯೇ ಇರುವ ಸೌಲಭ್ಯ. ಆ ಗುರುಗಳೆಲ್ಲರೂ ನಮ್ಮಲ್ಲೇ ನಮ್ಮ ಆಂತರಿಕಪ್ರಪಂಚಗಳಲ್ಲೇ ಇದ್ದಾರೆ. ಅವರನ್ನು ತಲುಪಲು ಸಹಾಯಕವಾಗುವ ಸೇತುವೆಯೇ ಶ್ವಾಸ. ಈ ಶ್ವಾಸದ ಮೇಲೆ ಗಮನವಿಟ್ಟಾಗ ನಮ್ಮ ಆಂತರಿಕ ಪ್ರಯಾಣ ಆರಂಭವಾಗುತ್ತದೆ. ಆಂತರಿಕ ಪ್ರಪಂಚ ತಲುಪಿದಾಗ ಮೌನದ ಸಂಧಿಯಾಗುತ್ತದೆ. ಅಲ್ಲಿ ಮೌನವಾಗಿ ಮಾಡುವ ನಿರೀಕ್ಷೆಯೇ ಆತ್ಮಾವಲೋಕನ, ಹೆಚ್ಚು ಹೆಚ್ಚು ಧ್ಯಾನ ಮಾಡಿದಲ್ಲಿ ಜ್ಞಾನ ವಿಕಾಸವಾಗಿ, ನಾವು ಕೇವಲ ದೇಹವಲ್ಲ, ಆತ್ಮರು ಎಂದು ಅರಿಯುತ್ತೇವೆ. ಇದರಿಂದ ನಮ್ಮ ಬಾಳಿನಲ್ಲಿ ಆರೋಗ್ಯ, ಭಾಗ್ಯ, ಚೈತನ್ಯ ನಮ್ಮದಾಗುತ್ತದೆ.

ಧ್ಯಾನ ಮನಸ್ಸಿಗೆ ಪಾಠ!

ಮೌನ ಆತ್ಮಕ್ಕೆ ಊಟ!!

-ಸಂಗ್ರಹ: ಸ್ಪಿರಿಚ್ಯುವಲ್ ಇಂಡಿಯಾ ಮ್ಯಾಗಜೈನ್ ನಿಂದ

- ಕನ್ನಡಕ್ಕೆ: ಬಿ.ಶ್ರೀನಿವಾಸ,ಬೆಂಗಳೂರು.

ಹಿಂದಿನ ಸಂಚಿಕೆಯಿಂದ...

# ಬಿಗ್ ಜಾಯ್ - ಗ್ರೇಟೆಸ್ಟ್ ಜಾಯ್

**ಮಾರಂ ಶಿವಪ್ರಸಾದ್:** ವೇದವ್ಯಾಸ ತಿಳಿಸಿರುವ ಪ್ರಕಾರ ಈಗ ಮಹಾಯುಗಗಳು ಕಳೆದು ಹೋದವು. 20ನೇ ಮಹಾಯುಗದಲ್ಲಿ ಕೊನೆಯದಾದ ಕಲಿಯುಗದಲ್ಲಿ ಇರುವೆವು ಅಲ್ಲವೇ. ಈ ಭೂಮಂಡಲ ಪ್ರಸ್ತುತ ಸ್ಥಿತಿ ಕುರಿತು ವಿವರಿಸಿ ಹೇಳಿ!

**ಡಾ॥ ನ್ಯೂಟನ್:** ಅಂದರೆ, ಈ ಭೂಮಂಡಲವೇ ಒಂದು ಪಾಠಶಾಲೆ. ಒಂದು ಆಟದ ಶಾಲೆ. ನಾವೆಲ್ಲಾ ಒಂದು ಮಲ್ಟಿ ಡೈಮೆನ್ಷನಲ್ ಬೀಯಿಂಗ್ಸ್ ಸ್ಥಾಯಿಯಲ್ಲಿ ಆಯ್ಕೆ ಮಾಡಿಕೊಂಡು ಈ ಭೂಮಿ ಮೇಲೆ ಬಂದಿರುವೆವು. ಈ ಭೂಮಿಯ ಪ್ಲಾನೆಟ್‌ಗೆ ಅನೇಕ ಇತರ ಪ್ಲಾನೆಟ್ಸ್‌ಗಿಂತ ಕೂಡ ಹೆಚ್ಚು ಪ್ರತ್ಯೇಕತೆ ಇದೆ. ಈ ಭೂಮಂಡಲದಲ್ಲಿ "ಒಂದು ಆಟ ಆಡುವುದಕ್ಕೆ" ನಾವು ಬಂದಿರುತ್ತೇವೆ. ಆದರೆ ಪ್ರತಿ ಆಟಕ್ಕೂ ಪ್ರತ್ಯೇಕವಾದ ನಿಯಮ ಇದೆ! ಆಟದ ನಿಯಮ ಆದೇ ಎಳೆದಾಡುತ್ತಿರುವ ದ್ವಂದ್ವ ಎನ್ನುವ ಆಟ! ನಾವು ಇಲ್ಲಿ ಎರಡೂ ಕಡೆಯೂ ನೋಡಿ, ''ಮಧ್ಯದ ದಾರಿ''ಗೆ ಬಂದು ಬಿಡಬೇಕು. ಅದೇ ''ಮಧ್ಯೆ ಮಾರ್ಗ'' ಎಂದು ಪತ್ರೀಜಿ ಯಾವಾಗಲೂ ಹೇಳುತ್ತಿರುವುದು. ಬುದ್ಧನು ಸಹ ಅದೇ ಹೇಳುತ್ತಿರುವುದು! ಧ್ಯಾನ ಮಾಡುತ್ತಾ, ಜ್ಞಾನ ಮಾರ್ಗದಲ್ಲಿ ಜೀವನ ಮಾಡುತ್ತಾ, ಮಧ್ಯ ಮಾರ್ಗದಲ್ಲಿದ್ದುತ್ತಾ, ಕಡಮೆಯೋ, ಹೆಚ್ಚೋ ಇಲ್ಲದಂತೆ, ಸಮನಾಗಿ ಒನ್ನೆಸ್‌ನ್ನು ಅರ್ಥಮಾಡಿಕೊಳ್ಳುತ್ತಾ ಸಾಗಬೇಕು. ಭಿನ್ನತ್ವದಲ್ಲಿ ಏಕತ್ವವನ್ನು ನೋಡಬೇಕು. ಪ್ರತಿಯುಗದಲ್ಲೂ ರಾಮ ಇರುತ್ತಾನೆ, ರಾವಣನೂ ಇರುತ್ತಾನೆ. ಮಹಾತ್ಮಗಾಂಧಿ ಇರುತ್ತಾರೆ, ಹಿಟ್ಲರೂ ಇರುತ್ತಾರೆ. ಎಲ್ಲಾ Polarities ನೋಡಬೇಕು. ಆಗಲೇ ನಾವು ಸಮನಾಗಿ ಇರಬಹುದು. ಪ್ರತಿಯುಗದಲ್ಲೂ ಇದು ಜರುಗುತ್ತಲೇ ಇರುತ್ತದೆ. ಈ ಭೂಮಂಡಲದ ಮೇಲೆ ಇನ್ನೂ ಎಷ್ಟು ಯುಗಗಳು ಕಳೆದರೂ ಸಹ, ಸತ್ಯವನ್ನು ತಿಳಿದುಕೊಂಡು, ಆಚರಿಸದಿದ್ದರೆ, ಯಾವಾಗಲೆಂದರೆ ಆಗ, ದ್ವಂದ್ವವು ಉಂಟಾಗುತ್ತದೆ. ದ್ವಂದ್ವ ಇಲ್ಲದಿದ್ದರೂ ಸಹ ನಾವು ಏಕತ್ವಕ್ಕೆ ಬರುವುದಿಲ್ಲ. ಇವೆಲ್ಲಾ ನಾವು ಆಯ್ಕೆಮಾಡಿಕೊಂಡಿರುವುದೇ, ಆದುದರಿಂದಲೇ, ನಮ್ಮ ಮೊದಲ ಮಾನವ ಜನ್ಮದಲ್ಲಿ Infant Soul, Baby Soul, Youth Soul, ಹೀಗೆಯೇ ಮುಂದುವರೆದು, ಬಹಳ ತರ್ಕವನ್ನು ಕಂಡುಕೊಳ್ಳುತ್ತಲೇ ಇರುತ್ತೇವೆ. ಯಾರಾದರೂ ಸರಿ, ಹಾಗೆಯೇ ಮೆಲ್ಲ ಮೆಲ್ಲಗೆ ಜನ್ಮ ಜನ್ಮಕ್ಕೂ ಸ್ವಲ್ಪ ಆತ್ಮವು ಬೆಳವಣಿಗೆ ಹೊಂದುತ್ತಾ, ಮತ್ತಷ್ಟು ಪರಿಣತಿ ಹೊಂದುತ್ತಾ, 'ವೃದ್ಧಾತ್ಮ ಸ್ಥಿತಿ'ಗೆ ನಾವು ತಲುಪಿದಾಗ, ನಮಗೆ ಈ ಅರಿವು ಉಂಟಾಗುತ್ತದೆ. ಈ ದ್ವಂದ್ವವನ್ನೆಲ್ಲಾ ನಾವು ಚೆನ್ನಾಗಿ ಆಡಿಕೊಂಡು, ಅನುಭವಿಸಿ, ಕೊನೆಗೆ ಮುಕ್ತಾಯವಾಗಿ ವನ್‌ನೆಸ್‌ಗೆ ಬರುತ್ತೇವೆ. ಇವುಗಳೆಲ್ಲಾ ಬಹಳ ಚೆನ್ನಾಗಿರುವ ಆಟಗಳು! ಅದನ್ನೇ ಪತ್ರೀಜಿಯವರು 'ಲೀಲೆ', 'ಕ್ರೀಡೆ', 'ವಿನೋದ' ಎನ್ನುತ್ತಾರೆ.

**ಮಾ:** ಮತ್ತಷ್ಟು ವಿವರವಾಗಿ ತಿಳಿಸುತ್ತೀರಾ?

**ಡಾ॥ ನ್ಯೂ:** ''ಎಲ್ಲವೂ ನಮ್ಮಲ್ಲಿಯೇ ಇದೆ'' ಎನ್ನುವುದಕ್ಕೆ ಭೌತಿಕವಾಗಿ ಎಷ್ಟೋ ಉದಾಹರಣೆಗಳು ನಾವು ಹೇಳಬಹುದು. ಹಿರಣ್ಯ ಕಶಿಪುವಿನ ಮಗ ಪ್ರಹ್ಲಾದನು ತಂದೆಯ ಮರಣಕ್ಕೆ ಕಾರಣನಾದನು. ರಾವಣನ ತಮ್ಮ ವಿಭೀಷಣನು ರಾವಣನ ಮರಣ ರಹಸ್ಯವನ್ನು ರಾಮನಿಗೆ ತಿಳಿಸುತ್ತಾನೆ. ಧರ್ಮರಾಜನಿಗಿಂತ ಹಿರಿಯವನಾದ ಕರ್ಣನು ದುರ್ಯೋಧನನಿಗೆ ಸ್ನೇಹಿತನು ಆಗುತ್ತಾನೆ. ''ಇವುಗಳೆಲ್ಲಾ ಒಂದು ಆಟಗಳು'' ಎನ್ನುವುದಕ್ಕೆ ಇದಕ್ಕಿಂತ ಒಳ್ಳೆಯ ಉದಾಹರಣೆಗಳು ಏನಿದೆ ಹೇಳಿ?

**ಮಾ:** ಮನುಷ್ಯನಿಗೆ ಪ್ರತಿಯೊಂದೂ ಗೊತ್ತು. ಆದರೆ ಗೊತ್ತಿದ್ದೂ ನೀತಿಯನ್ನು ಹೇಳುತ್ತಲೇ ಇರುತ್ತಾರೆ. ಧರ್ಮದ ವಿಚಾರವಾಗಿ ಮತ್ತೆ ಮತ್ತೆ ಹೇಳುತ್ತಲೇ ಇರುತ್ತಾರೆ. ಮತ್ತೆ ಮತ್ತೆ ಮಾಯೆಗೆ ಗುರಿಯಾಗುತ್ತಿದ್ದಾರೆ. 'ಪ್ರಸೂತಿ ವೈರಾಗ್ಯ', 'ಸ್ಮಶಾನ ವೈರಾಗ್ಯ'ಗಳಲ್ಲಿ ಬೀಳುತ್ತಾ ಏಳುತ್ತಾ ಇದ್ದಾರೆ. ಎದುರು ಏಟುಗಳು ಬಿದ್ದರೂ ಸಹ, ಮತ್ತೆ ಓಡುತ್ತಲೇ ಇರುತ್ತಾರೆ. ಭಯಪಡುತ್ತಾ ಇರುತ್ತಾರೆ. ಭ್ರಮೆ ಪಡುತ್ತಾ ಇರುತ್ತಾರೆ. ಸೃಷ್ಟಿಯು ಮೊದಲಿನಿಂದ ಇದುವರೆವಿಗೂ ಹೀಗೆಯೇ! ಪ್ರಪಂಚವೆಲ್ಲಾ ಧ್ಯಾನಮಯವಾದ ತರುವಾಯವಾದರೂ ಈ ವಿಷಾದದ ಪರಿಸ್ಥಿತಿ ತಪ್ಪುತ್ತದೆಯೋ?



**ಡಾ|| ನ್ಯೂ:** ಮನುಷ್ಯನಿಗೆ ಯಾವಾಗ ಪೂರ್ತಿ "Transformation ಅಂದರೆ, ಪರಿವರ್ತನೆಯಾಗುತ್ತದೆಯೋ" ಆಗಲೇ ಆ ವಿಷಾದವು ಕೊನೆಯಾಗುತ್ತದೆ. ಒಬ್ಬರು ತಮ್ಮ ಶರೀರವನ್ನು ಬಿಟ್ಟರು ಎಂದಿಟ್ಟುಕೊಳ್ಳೋಣ, ಆಗ ಆ ಸಮಯದಲ್ಲಿ ಸ್ಮಶಾನಕ್ಕೆ ಹೋಗಿರುವವರಿಗೆ "ಸ್ಮಶಾನ ವೈರಾಗ್ಯ" ಬರುತ್ತದೆ. "ಏನು ಜೀವನ? ಏಕೆ ಹೀಗೆ? ಏನು ನಡೆಯುತ್ತದೆ. ಈ ಜನನ ಮರಣವೇನು?" ಎನ್ನುವ ಪ್ರಶ್ನೆಗಳು ಬರುತ್ತವೆ. ತಾತ್ಕಾಲಿಕ ಚಲನೆ ಅದು. ಏನದು ನಿಜವಾಗಿಯೂ ಸತ್ಯವೇ? ಎಂಬ ಆಲೋಚನೆಯಲ್ಲಿರುತ್ತಾರೆ. ಅನಂತರ, ಮತ್ತೆ ಅದೇ ಟಿಪ್ಪಣಿ ಮಾಮೂಲು. ಏಕೆಂದರೆ, ಅವರು ಈ ಪ್ರಶ್ನೆಗಳನ್ನು ಸರಿಯಾಗಿ ನಿರ್ವಹಿಸಿರುವುದಿಲ್ಲ, ಆದರೆ, ಯಾರು ಬುದ್ಧತ್ವ ಸಿದ್ಧಿಗೆ ಹತ್ತಿರ ಬರುತ್ತಾರೋ, ಆ ಬುದ್ಧತ್ವವನ್ನು ಹೊಂದಬೇಕೆಂದುಕೊಳ್ಳುತ್ತಾರೋ, ಅವರು ಆ ಪ್ರಶ್ನೆಗಳಿಗೆ ಉತ್ತರವನ್ನು ಪಡೆಯುವವರೆವಿಗೂ ಸಾಧನೆ ಮಾಡುತ್ತಲೇ ಇರುತ್ತಾರೆ. "Who am I? Who are you?" ಈ ತರಹ ಪ್ರಶ್ನೆಗಳನ್ನು ಧ್ಯಾನದಲ್ಲಿ ತಂದುಕೊಂಡು ತಮ್ಮ ಮೂರನೇ ಕಣ್ಣಿನ ವಿಜನ್‌ನಿಂದ ಸರಿಯಾದ ಉತ್ತರ ಪಡೆಯುವವರೆಗೂ ನಿದ್ರೆ ಮಾಡುವುದಿಲ್ಲ, ಕೊನೆಯಾಗಿ ಆ ಧ್ಯಾನ ಸಾಧನೆಯಿಂದ ಜ್ಞಾನವನ್ನು ಹೊಂದುತ್ತಾರೆ. ಇದೇ ಧ್ಯಾನ ಮಾಡುವವರಿಗೆ, ಮಾಡದೇ ಇರುವವರಿಗೆ ವ್ಯತ್ಯಾಸವು. ಈ ಭೂಮಂಡಲವೆಲ್ಲಾ ಧ್ಯಾನಮಯವಾದಾಗ, ಆ ಕುಟುಂಬದಲ್ಲಿ ಜನಿಸುವವರೆಲ್ಲರೂ ಸಹ ಓದುವುದಕ್ಕೆ ಮುಂಚೆಯೇ ಧ್ಯಾನವನ್ನು ಕಲಿಯುತ್ತಾರೆ. ಹಾಗೆಯೇ ಜೀವಿಸುತ್ತಾರೆ. ಆದುದರಿಂದ, ಧ್ಯಾನಮಯ ಕುಟುಂಬಗಳು ಧ್ಯಾನಮಯ ಜೀವನವು ಎಲ್ಲರಿಗೂ ಇರಬೇಕೆಂದು ಪತ್ರೀಜಿಯವರು ಇಷ್ಟು ಶ್ರಮ ಪಡುತ್ತಿದ್ದಾರೆ.

**ಮಾ:** ಈಗ ಮನುಷ್ಯರು ಸಾಧನೆ ಮಾಡುತ್ತಾ ಇರುವಾಗ, ನಮ್ಮ ವೈಕುಂಠಪಾಳಿಯಲ್ಲಿರುವಂತೆ ಮನುಷ್ಯನು ಏಣಿಯನ್ನು ಹತ್ತಿದಂತೆ ಎತ್ತರಕ್ಕೆ ಹೋಗುತ್ತಾ ಮತ್ತೆ ಹಾವಿನ ಬಾಯಲ್ಲಿ ಬಿದ್ದು ಮತ್ತೆ ಕೆಳಗೆ ಜಾರುತ್ತಲೂ ಇರುತ್ತಾರಲ್ಲವೇ ಮತ್ತೆ ಅದ್ಭುತವಾದ ಸಾಧನೆ ಮಾಡಿ, ವೈಕುಂಠ ಪಾಳಿಯಲ್ಲಿ ಶೇ.98ರಷ್ಟು ಸಾಧಿಸಿದವರು, ಶೇ.99ರಷ್ಟು ಸಾಧಿಸುವಷ್ಟರಲ್ಲಿ ಹಾವಿನ ಬಾಯಲ್ಲಿ ಬೀಳುವವರೂ ಇದ್ದಾರೆ, ಇರುತ್ತಾರೆ. ಕೆಲವರು, ಅಷ್ಟು ಶ್ರಮಿಸಿ ಕೊನೆಯ ಹಂತದಲ್ಲಿ ಏಕೆ ಹಾಗಾಗುತ್ತಾರೆ?

**ಡಾ || ನ್ಯೂ:** ಇವುಗಳು ಸಹ ಈ ಭೂಮಂಡಲದಲ್ಲಿ ಮನುಷ್ಯನು ಇಟ್ಟುಕೊಂಡಿರುವ ಪ್ರತಿಜ್ಞೆಗಳು. ಕೊನೆಯ ಕ್ಷಣದಲ್ಲಿ ಹೀಗೆ ಯೋಗ ಭ್ರಷ್ಟರು ಆಗುವುದು ಸಹ ಅದರ ಒಂದು ಭಾಗ. ಪ್ರತಿ ಕ್ಷಣವು ಜಾರುತ್ತಾ



ಏಳುತ್ತಾ ಇರುವುದನ್ನು ಸಹ ಆಯ್ಕೆ ಮಾಡಿಕೊಂಡು ಕೆಲವರು ಬರುತ್ತಾರೆ. ಹಾಗೆಯೇ ಶೇ.98, 99ರಲ್ಲಿ ಸಹ ಮುಗಿಯದೆ ಇರುವುದನ್ನು ಒಂದು ಸವಾಲಿನಂತೆ ತೆಗೆದುಕೊಳ್ಳುತ್ತಾರೆ. ಹೀಗೆ ಮಾಡುವುದು ಅಹಂಕಾರವನ್ನು ಜಯಿಸುವುದಕ್ಕೆ. ಕೆಲವರು ತಮಗೆ ಇಷ್ಟವಾದ ವಸ್ತುವನ್ನು ಆಯ್ಕೆ ಮಾಡಿಕೊಂಡು ಹಾಗೆಯೇ ಇದ್ದು, ಮುಂದೆ ಹೋಗುವುದಕ್ಕೆ ಪ್ರಯತ್ನಿಸುತ್ತಾ ಶೇ.99ರಷ್ಟು ಸಾಧಿಸಿದಾಗ ಜಾರಿ ಬೀಳುತ್ತಾರೆ. ಇವುಗಳಿಗೆಲ್ಲಾ ಅತೀತವಾದ ಇಷ್ಟೋ ಆನಂದ, ಮಹದಾನಂದ, ಬ್ರಹ್ಮಾನಂದ, ಹೊಂದಬೇಕೆಂದು ಅಂದುಕೊಳ್ಳುತ್ತಿರುವವರು ವಸ್ತುಗಳಿಂದ ಪಡೆಯುವ ಆನಂದವನ್ನು ಪೂರ್ತಿ ಹೊಂದಿ, ಇಲ್ಲವೇ ಅವುಗಳಲ್ಲಿ ಕಡ್ಡಿ ಪೊರಕೆಯಂತೆ, ತ್ಯಗೀಕರಿಸಿಯಾಗಲಿ ತೀರವನ್ನು ದಾಟಿ, ಅಂದರೆ, ಆಜ್ಞಾ ಚಕ್ರವನ್ನು ದಾಟಿ ಜೀವನವನ್ನು ಪೂರ್ತಿ ಮಾಡುತ್ತಾರೆ. ಆದುದರಿಂದಲೇ, ಇವುಗಳನ್ನೆಲ್ಲಾ ತಿಳಿದುಕೊಂಡು ಪೂರ್ತಿ ಮಾಡಿಕೊಳ್ಳುವುದಕ್ಕೋಸ್ಕರ ಬಾಧೆಗಳನ್ನು ಆಯ್ಕೆ ಮಾಡಿಕೊಂಡು ನಾವೇ ಬರುತ್ತೇವೆ!

**ಮಾ:** ಮತ್ತೆ ಶೇ.98 ರಷ್ಟು ಸಾಧಿಸಿ, ಆದರೆ, ಶೇ.99ಕ್ಕೆ ಬರುವಷ್ಟರಲ್ಲಿ ಕೆಳಕ್ಕೆ ಬಿದ್ದವರ ಪರಿಸ್ಥಿತಿ ಏನು?

**ಡಾ|| ನ್ಯೂ:** ಶೇ.98ರ ತನಕ ಬಂದು, ಶೇ.99ಕ್ಕೆ ಬಿಟ್ಟು ಹೋಗಿರುವವರು ಮತ್ತೆ ತರುವಾಯ ಜನ್ಮದಲ್ಲಿ ಆರಂಭದಿಂದ ಬರಬೇಕಾಗಿದೆ. ಪರಿಪಕ್ವತೆ ಹೊಂದುವ ಸಮಯದಲ್ಲಿ ಬಿಟ್ಟು ಹೋಗಿರುವ ಇಲ್ಲವೆ, ಮುಗಿದು ಹೋಗಿರುವವರು, ಆದರೆ, ಮರುಜನ್ಮದಲ್ಲಿ ಮತ್ತೆ ಸಾಧನೆ ಆರಂಭಿಸಿದಾಗ ಯಾವುದೋ ನಿರಂತರ

ಚಲನೆಯು ಗತದಲ್ಲಿ ಸಾಧಿಸಿದಾಗ, ಒಂದು ಕ್ಷಣ ಸ್ಮೃತಿಯಲ್ಲಿ ಬಂದು ಅದನ್ನು ತಿಳಿಯುತ್ತಾರೆ. ಚಿಕ್ಕ ವಯಸ್ಸಿನಲ್ಲೇ ಉನ್ನತ ಸ್ಥಿತಿಗೆ ಸೇರಿಕೊಂಡ ಯೋಗಿಗಳು ಈ ತರಹದವರೆ, ಧ್ರುವ, ಪ್ರಹ್ಲಾದ, ನಚಿಕೇತ, ಶಂಕರಾಚಾರ್ಯ ವಿವೇಕಾನಂದರಂತಹವರಲ್ಲಿ ಬೆಳವಣಿಗೆ ಬಹಳ ವೇಗವಾಗಿ ಇರುತ್ತದೆ. ಸಾಕ್ರಟೀಸ್ ಸತ್ಯವನ್ನು ಹೇಳಿ ವಿಷ ಕುಡಿದು ಸತ್ತು ಹೋದನು. ಆದರೆ, ಅಸತ್ಯವನ್ನು ಹೇಳಿ ತನ್ನ ಪ್ರಾಣವನ್ನು ಕಾಪಾಡಿಕೊಳ್ಳಲಿಲ್ಲ. ಜೀಸಸ್ ತಾನು ಶಿಲುಬೆಗೆ ಏರಲು ಇಷ್ಟಪಟ್ಟನೇ ಹೊರತು, ಭಯಪಡಲಿಲ್ಲ. ಸತ್ಯವನ್ನು ಹೇಳುವುದಕ್ಕೆ ಇವರು ಹಿಂಜರಿಯಲಿಲ್ಲ, ಯಾವಾಗಲೂ ಸತ್ಯದಲ್ಲೇ ಇದ್ದರು ಯಾರಿಗೂ ತಲೆ ಬಾಗಲಿಲ್ಲ, ಸತ್ಯವನ್ನೇ ಹೇಳುತ್ತಿದ್ದರು. ಇದು Litmus test. Any person in truth - in verge of death ಕೂಡ ಹಿಂದಕ್ಕೆ ಹೋಗುವುದಿಲ್ಲ!

**ಮಾ:** ಮತ್ತೆ ಎಲ್ಲಾ ಅನುಭವಿಸಿ ದಾಟಿ ಹೋದ ಯೋಗಿಯು ಹೆಚ್ಚೋ? ಎಲ್ಲಾ ತೃಣೀಕರಿಸಿ ಮುಂದಕ್ಕೆ ಹೋದ ಯೋಗಿಯು ಹೆಚ್ಚೋ?

**ಡಾ|| ನ್ಯೂ:** ''ಕಾಮಿಯಾಗಲಾರದವನು ಮೋಕ್ಷಗಾಮಿ ಆಗಲಾರ'' ಅಂದಿರುತ್ತಾನೆ ವೇಮನ. ಒಂದು ಕಡೆ , ಪತ್ರೀಜಿ ಸಹ ''ತುಳಸೀ ದಳ''ದಲ್ಲಿ ಸದಾನಂದ ಯೋಗಿ ಕುರಿತು ಬರೆಯುತ್ತಾ ಆಕಾಶವನ್ನೇ ಭೂಷಣದಂತೆ ಧರಿಸಿದವರಾಗಲಿ, ಹೆತ್ತ ಮಗುವನ್ನು ಮುದ್ದಾಡಿದರಾಗಲಿ, ಕನ್ಯೆಯನ್ನು ವರಿಸಿದರಾಗಲಿ ಬ್ರಹ್ಮಜ್ಞಾನಿಗಳಿಗೆ ಯಾವ ನ್ಯೂನತೆ ಇಲ್ಲ, ಎಂದು ಅವರು ನಮಗೆ ಪರಿಚಯಿಸಿದ್ದಾರೆ. Unless you experience everything, you can't leave anything! ಗೌತಮ ಬುದ್ಧನು ಕೂಡ ಯುವರಾಜನಾಗಿ Full of pleasures - ಎಲ್ಲಾ ಸುಖವನ್ನು ಪೂರ್ತಿಯಾಗಿ ಅನುಭವಿಸಿದ ನಂತರ ''ಇದೆಲ್ಲಾ ಏನೂ ಅಲ್ಲ - ಇದರಲ್ಲಿ ಏನೂ ಇಲ್ಲ'' ಎಂದು ಅರ್ಥ ಮಾಡಿಕೊಂಡು, ಆ ನಂತರ ಜ್ಞಾನಮೂರ್ತಿ



ಆದನು. ವೇಮನ ಸಹ ಹಾಗೆಯೇ.

**ಮಾ:** ಅಂದರೆ, ''ಎಲ್ಲವನ್ನೂ ಕಾಲಿನಲ್ಲಿ ತಳ್ಳಿ, ತೃಣೀಕರಿಸಿ ಸಾಧಿಸಿಕೊಂಡ ಯೋಗಿಯು ಗತ ಜನ್ಮದಲ್ಲಿ ಸುಖಭೋಗಗಳನ್ನು ಪೂರ್ಣರೀತಿಯಲ್ಲಿ ಅನುಭವಿಸಿಯೇ ಇರುತ್ತಾನೆ ಎಂದು ನೀವು ಹೇಳುತ್ತೀರಾ?

**ಡಾ|| ನ್ಯೂ:** ನಿಜವಾಗಿಯೂ ಹೌದು! ಇದು ಎರಡು ಸ್ಥಿತಿಗಳು. ಕಾಯಿ ಹಣ್ಣಾದರೆ ಮಾತ್ರ ಕೆಳಗೆ ಬೀಳುತ್ತದೆ. Enlightenment will happen only when we become a complete fruit. Fullness means completeness.

**ಮಾ:** ನಾನು ನನ್ನ ಕ್ಲಾಸ್‌ನಲ್ಲಿ 'ನೂರು' ಪೂರ್ತಿ ಆದರೆ, ಆಜ್ಞಾಚಕ್ರ ಪೂರ್ತಿ ಆದರೆ, ಸಹಸ್ರಾರ ಸೇರಿಕೊಳ್ಳುವುದು ಬಹಳ ಸುಲಭ ಎಂದು ಹೇಳುತ್ತಾ ಇರುತ್ತೇನೆ. ಅಂದರೆ, ''ನೂರು ಪೂರ್ತಿಯಾದರೆ ಸಾವಿರ ಮಾಡುವುದು ಸುಲಭ ಎಂದು ಈ ಮಧ್ಯೆ ಪತ್ರೀಜೀ ಒಂದು ಪ್ರವಚನದಲ್ಲಿ, ''ಆಜ್ಞಾಚಕ್ರ ಪೂರ್ತಿ ಮಾಡಿದರೆ, ಅದು ಸಹಸ್ರಾರದಲ್ಲಿ ಎರಡು ರೆಕ್ಕೆಗಳು ಬಿಚ್ಚಿಕೊಂಡಿರುವಂತೆ ಎಂದು ಹೇಳಿರುತ್ತಾರೆ. ದಯ ಮಾಡಿ ಇದನ್ನು ವಿವರಿಸುತ್ತೀರಾ ಸಾರ್!

**ಡಾ|| ನ್ಯೂ:** ಹೌದು ಅಷ್ಟೇ. ಆಜ್ಞಾ ಚಕ್ರ ಪೂರ್ತಿಯಾದರೆ ನಿಮಗೆ 'ವೀಸಾ' ಪಾಸ್‌ಪೋರ್ಟ್ ಎರಡೂ ಬಂದಂತೆಯೆ. ಇಲ್ಲಿ ಬಂದವರು ಅಲ್ಲಿ ಒಂದೊಂದು Qualityಯನ್ನು ಹೊಂದುತ್ತಾ ಒಂದೊಂದು ರೆಕ್ಕೆ ಪೂರ್ತಿ ಮಾಡಿಕೊಳ್ಳುವುದಕ್ಕೆ ಬಹಳ ಸುಲಭ. ನಾವು ಟಿಕೇಟ್ ಬುಕ್ ಮಾಡಿಕೊಂಡು ಯಾವಾಗಲಾದರು ಅಲ್ಲಿಗೆ ಬೇಕಾದರೆ ಹೋಗಬಹುದು, ಆಗ ಎಲ್ಲವೂ ಕ್ರಮವಾಗಿ ಪೂರ್ಣಗೊಳ್ಳುತ್ತದೆ.

**ಮಾ:** ಆಜ್ಞಾ ಚಕ್ರವು ಪೂರ್ತಿಯಾಗುವುದೆಂದರೆ, ಕರ್ಮಗಳೆಲ್ಲ ಉರಿದು ಬೂದಿಯಾದಂತೆಯೇ ಅಲ್ಲವೆ?

**ಡಾ|| ನ್ಯೂ:** ಪೂರ್ತಿಯಾಗುತ್ತಾ ಇದೆ ಎಂದು ಅರ್ಥ. ಆಜ್ಞಾಚಕ್ರದಲ್ಲಿ ಪೂರ್ತಿ ಪರಿಪಕ್ವತೆ ಹೊಂದುತ್ತಾ ಕ್ರಮವಾಗಿ, ದಿವ್ಯನೇತ್ರವು ನಮ್ಮ ಒಂದೊಂದು ಜನ್ಮವು ನೋಡಿಕೊಳ್ಳುತ್ತೇವೆ. ಒಬ್ಬೊಬ್ಬ ಯೋಗಿಗಳನ್ನು ಸ್ಪರ್ಶಿಸುತ್ತೇವೆ. ನಮ್ಮಲ್ಲಿರುವ ಅಣು-ಪರಮಾಣುವನ್ನು ದರ್ಶಿಸುತ್ತೇವೆ. ಕಾರ್ಯ-ಕಾರಣ ಸಂಬಂಧಗಳನ್ನು ನೋಡುತ್ತೇವೆ. Illusion, ಭ್ರಮೆಗಳು, ಮಾಯೆಗಳು ಎಲ್ಲವನ್ನೂ ದ್ವಂದ್ವಗಳನ್ನು ನೋಡುತ್ತೇವೆ. ನಮ್ಮ ಭೌತಿಕ ನೇತ್ರಗಳಿಂದ ನೋಡಲಾಗದ ಈ ದ್ವಂದ್ವ

ರಾಹಿತ್ಯವನ್ನು ನಮ್ಮ ಮೂರನೇ ಕಣ್ಣಿನಿಂದ ಮಾತ್ರವೇ ನೋಡುತ್ತೇವೆ. ಹಾಗೆ, ಕ್ರಮವಾಗಿ ಆಜ್ಞಾ ಚಕ್ರವು ಪೂರ್ತಿಯಾಗುತ್ತಿರುತ್ತದೆ. ಸಹಸ್ರಾರದಲ್ಲಿ ಒಂದೊಂದು ರೆಕ್ಕೆಯು ಬಿಚ್ಚಿಕೊಳ್ಳುತ್ತಿರುತ್ತದೆ. ಸಾಧನೆಯಿಂದ ನಮ್ಮ ಪುರೋಗಮನವು ಇರುತ್ತದೆ. ಪೂರ್ತಿ ಮಾಡುವುದೂ ಇರುತ್ತದೆ.

**ಮಾ:** ಮತ್ತೆ ನಾವು ''ಪಿರಮಿಡ್ ಸ್ಪಿರಿಚ್ಯೂಯಲ್ ಸೊಸೈಟಿ''ಯಲ್ಲಿ ಬಂದೆವು. ನೀವೂ, ನಾನು ಹೀಗೆಯೇ ಎಷ್ಟೋ ಜನಗಳು ನಮ್ಮ ಪತ್ರಿ ಸಾರ್ ಹಿಂದೆ ಇದ್ದು, ನಾವು ಎಷ್ಟೋ ಕಲಿತುಕೊಂಡೆವು. ಫಲಗಳನ್ನು ಪಡೆದೆವು. ಅನುಭವಗಳು ಪೂರ್ತಿಯಾಯಿತು. ಬಹಳಷ್ಟು ಒಳ್ಳೆಯ ಅನುಭೂತಿಗಳು ಇವೆ. ಯಾವುದರ ಬಗ್ಗೆ ವ್ಯಾಮೋಹವೂ ಇಲ್ಲ, ಯಾರಾದರೂ ಏನಾದರೂ ಕೇಳಿದರೂ ಆಗಲೇ ಜವಾಬು ಬರುತ್ತಿರುತ್ತದೆ. ನಮ್ಮ ಹತ್ತಿರ ಕುಳಿತಿರುವಾಗ, ಬಾಧೆಯಲ್ಲಿ, ಸಮಸ್ಯೆಯಲ್ಲಿ, ಇರುವವರು ನಮ್ಮ ವೈಬ್ರೇಷನ್ನಿನಿಂದ ಸುಖವಾಗಿರುತ್ತಾರೆ. 'ಧ್ಯಾನವು ಬೇಕಾಗಿಲ್ಲ' ಎನ್ನುವವರು ಸಹ ಧ್ಯಾನ ಮಾಡಿಹೋಗುತ್ತಾರೆ! ಕ್ರಮೇಣ ಒಳ್ಳೆಯ ಪಿರಮಿಡ್ ಮಾಸ್ಟರಾಗುತ್ತಾರೆ.

ಓಕೆ ! ಮತ್ತೆ ನಾವು ಯಾವುದಾದರೂ ವ್ಯಾಪಾರದಲ್ಲಿ ಸೇರಬೇಕೆನಿಸಿದರೆ ನಾವು ಸೇರಬಹುದಾ ಇಲ್ಲವಾ? ಸೇರಲು ಆಗಲು ಎಷ್ಟು ದಿವಸಗಳು ಸಮಂಜಸವಾಗುತ್ತದೆ?

**ಡಾ|| ನ್ಯೂ:** ಒಬ್ಬ ಎನ್‌ಲೈಟೆಡ್ ಮಾಸ್ಟರು ಯಾವುದಾದರೂ ಮಾಡಬಹುದು! ವ್ಯಾಪಾರ, ಉದ್ಯೋಗ, ವ್ಯವಸಾಯ ಸಂತೋಷವಾಗಿ ಮಾಡಬಹುದು. ಆದರೆ, ಎನ್‌ಲೈಟನ್ ಆಗುವುದಕ್ಕೆ ಮುಂಚೆ, ಈಗಿನ Qualityಗೂ ವ್ಯತ್ಯಾಸ ಇರುತ್ತದೆ. ಈಗ ಇದು 'Spiritual Business' Win-Win Business ಇಲ್ಲಿ ನಮಗೆ ಒಂದು ನ್ಯೂ element add ಆಗುತ್ತದೆ. ನಮ್ಮ Whole quality different. Life Transform ಆದ ನಂತರ ಯಾವುದು ಮಾಡಿದರೂ ಅದು ಸರಿ, An Enlightened Master will be Enjoying with his wife & family, enjoying in intercourse, enjoying in any trade, everything. ನಾವು ಯಾವುದಾದರೂ ತ್ಯಜೀಕರಿಸಿದರೆ, ಅದು ಅಜ್ಞಾನ, ಅಹಂಕಾರ ಅಭಿಜಾತ್ಯ, ಮೂರ್ಖತನ, ಇವುಗಳನ್ನು stupidities, fears, unconsciousness, ಇವರುಗಳನ್ನು ತ್ಯಜೀಕರಿಸುತ್ತೇವೆ. You are the joy! You are the Love! You are the Friendship! You are the Empowerment of everything!

Nothing is wrong to a Brahma Jnani. ಬ್ರಹ್ಮಜ್ಞಾನಿ ಏನು ಮಾಡಿದರೂ ತಪ್ಪಲ್ಲ. ಅಷ್ಟೇ ಹೀಗೆಯೇ ಅವರು ಯಾವುದಕ್ಕೂ ಬೆದರುವುದಿಲ್ಲ, ಸುಖದುಃಖಗಳು ಅವರನ್ನು ಕದಲಿಸಲಾಗುವುದಿಲ್ಲ! ಸಮುದ್ರದಲ್ಲಿನ ಅಲೆಗಳು, ಅವರನ್ನು ಕದಲಿಸಲಾಗುವುದಿಲ್ಲ! ಸಮುದ್ರ ಮಧ್ಯದಲ್ಲಿ ಎಷ್ಟು ಸ್ಥಿರವಾಗಿ, ಪ್ರಶಾಂತವಾಗಿ ಇರುತ್ತದೋ, ಹಾಗೆಯೇ ಅವರು ಸಹ ಇರುತ್ತಾರೆ ಯಾವುದು ಮಾಡಿದರೂ ಸರಿ! ಏನು ಮಾಡದಿದ್ದರೂ Perfect!

**ಮಾ:** ಮತ್ತೆ ಬ್ರಹ್ಮಜ್ಞಾನಿಗಳಿಗೆ 'ತೊಂದರೆಗಳು' ಕಷ್ಟಗಳು ಇರುತ್ತವೆಯೋ? ಬರುತ್ತದೆಯೊ? ಹಾಗಾದರೆ, ಆಯಾ ಸ್ಥಿತಿಯಲ್ಲಿ ಅವರ ವರ್ತನೆ ಹೇಗೆ ಇರುತ್ತದೆ?

**ಡಾ || ನ್ಯೂ:** ಇರುತ್ತವೆ ಮತ್ತಷ್ಟು ಹೆಚ್ಚಾಗಿಯೇ ಬರುತ್ತದೆ! ಆದರೆ, ಅವುಗಳು unattached! ಅವು ಯಾವುದೂ ಬ್ರಹ್ಮಜ್ಞಾನಿಯನ್ನು ಕದಲಿಸಲಾರವು. ಜೀಸಸ್ ಕ್ರೈಸ್ತರಿಗೆ ಎಷ್ಟು ಬಂದಿತೋ. Enlightened masters ಗೆ ಎಲ್ಲಾ ಬರುತ್ತವೆ. ಜಾನ್‌ರಂತೆ ಜೈಲಿನಲ್ಲಿರುತ್ತಾರೆ. ಒಬ್ಬ ಜುದಾಸ್ ಬರುತ್ತಾರೆ. ಪಿತೂರಿ ಮಾಡುತ್ತಾರೆ. ಒಬ್ಬ ಪೀಟರ್ ಬರುತ್ತಾರೆ. ಹಿಂದಕ್ಕೆ ತಳ್ಳುತ್ತಾರೆ. ಆದರೆ, ಎಲ್ಲವನ್ನೂ ಜೀಸಸ್ ತರಹ ಎಂಜಾಯ್ ಮಾಡುತ್ತಾರೆ. ಬುದ್ಧನ ಹಾಗೆ ಶಾಂತಿಯಿಂದ ಇರುತ್ತಾರೆ. ಮಹಮದ್ ತರಹ ಪ್ರೇಮ ಮೂರ್ತಿಯಂತೆ ಇರುತ್ತಾನೆ. ಪತ್ರೀಜಿ ತರಹ ಸಂಪೂರ್ಣ ಜ್ಞಾನ ಸ್ಥಿತಿಯಲ್ಲಿ ಇರುತ್ತಾರೆ. ಜೈಲಿನಲ್ಲಿಟ್ಟರೆ, ನಮ್ಮ ಪತ್ರೀಜಿ ಓದಿದ ಹಾಗೆ ಸಾವಿರಾರು ಸ್ಪಿರಿಚ್ಯೂಯಲ್ ಪುಸ್ತಕವನ್ನು ಓದುತ್ತಾರೆ. ''ನನಗೆ ಎಷ್ಟು ಒಳ್ಳೆಯ ಅವಕಾಶ ಒದಗಿ ಬಂದಿದೆ'' ಎನ್ನುತ್ತಾರೆ.

**ಮಾ:** ಅಂದರೆ, ಯಾವ ಪರಿಸ್ಥಿತಿಯಲ್ಲಿದ್ದರೂ ಅದನ್ನೇ ಎಂಜಾಯ್ ಮಾಡುತ್ತಾರೆ? ಅಷ್ಟೇನಾ?

**ಡಾ|| ನ್ಯೂ:** ಅಕ್ಷರ ನಿಜ ಯಾವುದನ್ನೂ ನಿರಾಕರಿಸುವುದಿಲ್ಲ, ಎಲ್ಲೂ ಹಿಂದೆ ಬೀಳುವುದಿಲ್ಲ.

One complete acceptance - one completeness.

**ಮುಂದುವರೆಯುವುದು...**



# ಸಾಮೂಹಿಕ ಧ್ಯಾನ

ಪಿರಮಿಡ್ ಮಾಸ್ಟರುಗಳು ಆಚರಣೆ ಮಾಡುವ ಅಂಶಗಳಲ್ಲಿ ಒಂದು ಪ್ರಧಾನವಾದ ಅಂಶವೇ "ಸಾಮೂಹಿಕ ಧ್ಯಾನ." ಸಾಮೂಹಿಕ ಧ್ಯಾನದ ಪ್ರಾಧಾನ್ಯತೆ ಬಗ್ಗೆ ವಿವರವಾಗಿ, ಶಾಸ್ತ್ರೀಯವಾಗಿ ತಿಳಿಸಿ ಹೇಳುವುದರಲ್ಲಿ ಟಾರ್ಕಾಮ್ ಸೆರಾಯ್ ಡಾರಿಯನ್ ಪರಿಣಿತ. ಆ ವಿಶೇಷಗಳನ್ನು ನಾವೂ ಒಂದಿಷ್ಟು ತೆರೆದು ನೋಡೋಣ.

- ಎಡಿಟರ್

### ಸಾಮೂಹಿಕ ಧ್ಯಾನ

ವ್ಯಕ್ತಿಗತವಾದ ಧ್ಯಾನವು ಕೊನೆಗೆ ಸಾಮೂಹಿಕ ಧ್ಯಾನಕ್ಕೆ ದಾರಿಯಾಗಬೇಕು! ಆ ಧ್ಯಾನ ಸಮೂಹವು ವ್ಯಕ್ತಿಗತ ಧ್ಯಾನದಲ್ಲಿ ನಿಜವಾದ ವಿಜಯವನ್ನು ಸಾಧಿಸಿದವರಲ್ಲಿ ಸೇರಬೇಕು.

ಪ್ರೇಮ, ಶಾಂತಿ, ಶಕ್ತಿಯನ್ನು ಗ್ರಹಿಸುವುದಕ್ಕೆ, ಸಾಮೂಹಿಕ ಪ್ರಯತ್ನದಿಂದ ಒಂದು ಮಾರ್ಗವನ್ನು ಏರ್ಪಾಡು ಮಾಡಿ, ಅವುಗಳನ್ನು ಆ ಸಮೂಹದಲ್ಲಿ ಸಭ್ಯರು ಇರುವ ಎಲ್ಲಾ ಕಡೆಗಳಲ್ಲೂ ವ್ಯಾಪಿಸುವಂತೆ ಮಾಡುವ ಪ್ರಕ್ರಿಯೆಯೇ ಸಾಮೂಹಿಕ ಧ್ಯಾನ.

### ಧ್ಯಾನ ಸಮೂಹಗಳು

ಧ್ಯಾನ ಸಮೂಹಗಳು ಮೂರು ತರಹ ಇರುತ್ತವೆ!

1. ಸಮೂಹದಲ್ಲಿರುವ ಸಭ್ಯರು ಸಮಾನ ಮನಸ್ಸಿನವರೊಡನೆ ಸೇರುವುದು ಮೊದಲ ತರಹದ ಸಮೂಹ.
2. ಸಭ್ಯರು ಬೇರೆ ಬೇರೆ ಪ್ರಾಂತದಲ್ಲಿ ಇದ್ದರೂ ಸಹ ಒಂದೇ ಸಮಯದಲ್ಲಿ ಒಂದೇ ಮಾತಿನಂತೆ ನಡೆಯುತ್ತಾ, ಧ್ಯಾನ ಸೇವೆ ಮಾಡುತ್ತಾರೆ, ಇದು ಮತ್ತೊಂದು ತರಹದ ಸಮೂಹ.
3. ಮೂರನೆಯದು ವಿಶಿಷ್ಟವಾದ ಸಮೂಹ. ಈ ಸಮೂಹದಲ್ಲಿನ ಸಭ್ಯರು ಉನ್ನತವಾದ ಮಾನಸಿಕ ಅಂತಃ ಪ್ರೇರಣೆ ಉಳ್ಳವರೊಡನೆ ಸೇರಿಕೊಳ್ಳುತ್ತಾರೆ. ಹೀಗೆ ಸೇರುವುದು, ಅವರಿಗೆ ತಿಳಿದೋ, ತಿಳಿಯದೆಯೋ ನಡೆಯುತ್ತಾ ಇರುತ್ತದೆ.

ಒಂದೇ ವ್ಯಕ್ತಿಯ, ಒಂದೇ ಸಮಯದಲ್ಲಿ ಮೇಲಿನ ಎಲ್ಲಾ ಸಮೂಹಗಳಿಗೆ ಆಗಲಿ, ಅವುಗಳಲ್ಲಿ ಯಾವುದೋ ಒಂದಕ್ಕಾಗಲಿ, ಇಲ್ಲವೇ ಅವುಗಳಲ್ಲಿ ಯಾವುದೋ ಎರಡಕ್ಕಾಗಲಿ ಸೇರಬಹುದು.

### ಸಂಘಟಿತ ಶಕ್ತಿ

ಒಬ್ಬರ ಶಕ್ತಿಗಿಂತ, ಅನೇಕ ಮಂದಿ ಧ್ಯಾನಿಗಳ ಸಂಘಟಿತ ಶಕ್ತಿಗಳು, ಬೆಳಕನ್ನು ತಂದು ಮತ್ತಷ್ಟು ಒಳ್ಳೆಯ ಬದಲಾವಣೆಯನ್ನು ತರುತ್ತವೆ ಎಂದು ಹೇಳುವ ವಿಷಯವನ್ನು ನಾವು ಅರ್ಥ ಮಾಡಿಕೊಳ್ಳಬೇಕು. ಈ ವಿಷಯವು ನಮ್ಮ ನಿತ್ಯ ಜೀವನದಲ್ಲಿ ಸಹ ನಮಗೆ ಎದುರಾಗುತ್ತಾ ಇರುತ್ತದೆ, ಉದಾಹರಣೆಗೆ, ಭಾರವಾದ ವಸ್ತುವನ್ನು ಕದಲಿಸಲು, ಕಷ್ಟವಾದ ಕೆಲಸವನ್ನು ಕೂಡಲೇ ಪೂರ್ತಿ ಮಾಡುವುದಕ್ಕೆ ನಮಗೆ ಒಬ್ಬರ ಶಕ್ತಿ ಸಾಕಾಗದೆ ಹೋದಾಗ, ಬೇರೆಯವರ ಸಹಾಯವು ಬೇಕಾಗುತ್ತದೆ ಅಲ್ಲವೇ? ಆ ಕೆಲಸವು ಇನ್ನೂ ಬಹಳ ದೊಡ್ಡದಾದರೆ, ನಮಗೆ ಇನ್ನೂ ಹೆಚ್ಚು ಜನರ ಸಹಕಾರವು ಬೇಕಾಗುತ್ತದೆ.

ಸಾಮೂಹಿಕ ಧ್ಯಾನ, ಸಾಮೂಹಿಕ ಸೇವೆ ಎನ್ನುವುದು ಒಳ್ಳೆಯ ಸ್ವರ ಸಮ್ಮೇಳಗಳಂತೆ. ಬಹಳಷ್ಟು ವಾದ್ಯಗಳನ್ನು, ಸಾಮೂಹಿಕ ಚೈತನ್ಯದಲ್ಲಿ ಶೃತಿಮಾಡಿ, ಎಲ್ಲವನ್ನೂ ಒಂದೇ ರೀತಿಯಲ್ಲಿ ಹೊಂದಿಸಿ ಶ್ರಾವ್ಯವಾಗಿಸಲು ಕೂಡಿಸಿದರೆ, ಆಗ ಶ್ರಾವ್ಯವಾದ ಸಂಗೀತವು ಹೊರಡುವುದಿಲ್ಲವೇ, ಇದೂ ಸಹ ಅದರಂತೆಯೇ!

ಸಾಮೂಹಿಕ ಧ್ಯಾನದಿಂದ ನಮ್ಮ ಆತ್ಮ ಪ್ರಕಾಶಿಸುತ್ತದೆ. ಹೀಗೆ ಆ ಸಮೂಹದಲ್ಲಿನ ಸಭ್ಯರೆಲ್ಲರ ಆತ್ಮ ಪ್ರಕಾಶವು ನಿಜವಾದ ಪ್ರೇಮವನ್ನು ಹೆಚ್ಚಿಸುವ ಒಂದು ಕೇಂದ್ರವು ಏರ್ಪಡುತ್ತದೆ. ಕೇವಲ ಸಾಮೂಹಿಕ ಧ್ಯಾನದಿಂದ ಮಾತ್ರವೇ ನಾವು ಆ ತರಹದ ಪ್ರೇಮಾನುಭವವನ್ನು ಹೊಂದುತ್ತೇವೆ.

ಸಾಮೂಹಿಕ ಧ್ಯಾನವು ನಮ್ಮ ವ್ಯಕ್ತಿಗತವಾದ ಕಾಂತಿಯನ್ನು

ಇಚ್ಛಾಶಕ್ತಿಯನ್ನು ಅದ್ಭುತವಾಗಿ ವೃದ್ಧಿ ಮಾಡುತ್ತದೆ. ಒಂಟಿಯಾಗಿ ಧ್ಯಾನ ಮಾಡುವುದರಿಂದ, ವ್ಯಕ್ತಿಯು ಸ್ವಲ್ಪವೇ ಧ್ಯಾನದ ಅನುಭವವನ್ನು, ಜ್ಞಾನವನ್ನು ಹೊಂದುತ್ತಾನೆ. ಆದರೆ, ಸಾಮೂಹಿಕ ಧ್ಯಾನದಿಂದಾಗಿ ಸೇವೆ ಮಾಡದೆಯೇ ನಿಜವಾದ ಪ್ರೇಮ, ಇಚ್ಛಾ ಶಕ್ತಿಯನ್ನು ಹೊಂದುವುದು ಮಾತ್ರ ಆತನಿಗೆ ಅಸಾಧ್ಯ.

ಸಾಮೂಹಿಕ ಧ್ಯಾನವು ಉನ್ನತ ಶಕ್ತಿಯನ್ನು ಧಾರಕಾರವಾಗಿ ಹೊಂದಲು, ಪ್ರಚಾರಮಾಡಲು, ಅದನ್ನು ಹಂಚಲು - ಶಕ್ತಿಯನ್ನು ನಿರ್ಮಾಣಾತ್ಮಕವಾಗಿ ಉಪಯೋಗಪಡಿಸಿಕೊಳ್ಳಲು ಅವಕಾಶವನ್ನು ಒದಗಿಸುತ್ತದೆ.

ಸರಿಯಾದ ರೀತಿಯಲ್ಲಿ ಧ್ಯಾನ ಮಾಡದೆ ಇದ್ದಾಗ, ಈಗಾಗಲೇ ಸಂಗ್ರಹಿಸಿಕೊಂಡಿದ್ದ ಶಕ್ತಿಯು ಪೋಲಾಗುವ ಸಂಭವವಿದೆ. ಸಾಮೂಹಿಕ ಧ್ಯಾನ ಪದ್ಧತಿಯಿಂದ ಈ ಕೊರತೆಯನ್ನು ಸರಿಪಡಿಸಬಹುದು. ಅಷ್ಟೇ ಅಲ್ಲದೆ, ಆ ಸಮೂಹದಲ್ಲಿನ ಸಭ್ಯರೆಲ್ಲರ ಮಾನಸಿಕ ಗಾಯವನ್ನು ವಾಸಿಮಾಡಿ, ಎಷ್ಟೋ ಅಡ್ಡಿಗಳನ್ನು ತೊಲಗಿಸುತ್ತದೆ.

## ಅಯಸ್ಕಾಂತ ಕೇಂದ್ರ

ಸಾಮೂಹಿಕ ಧ್ಯಾನವು ಎಲ್ಲಿ ನಡೆದರೆ ಅಲ್ಲಿ ಒಂದು ಅಯಸ್ಕಾಂತ ಕೇಂದ್ರವು ಏರ್ಪಡುತ್ತದೆ. ಅದರ ಪರಿಣಾಮವಾಗಿ, ಧ್ಯಾನ ಮಾಡುತ್ತಿರುವ ಸಮೂಹದ ಸುತ್ತಾ ಉನ್ನತ ಶಕ್ತಿಗಳು ಸಂಚಯಗೊಳ್ಳುತ್ತವೆ.

ಯಾವಾಗ ಧ್ಯಾನ ಸಮೂಹವು ಧ್ಯಾನಕ್ಕೆ ಬದಲು ಸಾಮಾಜಿಕ ಕಾರ್ಯ ಕಲಾಪದಲ್ಲಿ ಮಗ್ನವಾಗುತ್ತದೆಯೋ, ಆಗ ಆ ಸಮೂಹವು ತನ್ನ ಆಯಸ್ಕಾಂತದ ಮೂಲಕ, ವಿಶಿಷ್ಟ ಆಕರ್ಷಣೆಯನ್ನು ಉಂಟುಮಾಡುತ್ತದೆ.

ದೊಡ್ಡ ಆಧ್ಯಾತ್ಮಿಕ ಕಾರ್ಯಕಲಾಪಗಳು ನಡೆಯುವ ಪ್ರದೇಶಗಳು ಪ್ರಪಂಚದಲ್ಲಿ ಬಹಳಷ್ಟು ಇವೆ. ಅವುಗಳಿಗೆ ಬಹಳ ಆಕರ್ಷಣ ಶಕ್ತಿ ಇದೆ. ಅಲ್ಲಿ ಕೆಲವರು ಮಹನೀಯರು ತಮ್ಮ ಧ್ಯಾನದಿಂದ ದಿವ್ಯಶಕ್ತಿಯನ್ನೂ, ಆಧ್ಯಾತ್ಮಿಕ ಶಕ್ತಿಯನ್ನೂ ಆಕರ್ಷಿಸಿ, ಅದನ್ನು ಹಾಗೆಯೇ ಅದುಮಿಟ್ಟು ನಿಲ್ಲಿಸಿರುವುದರಿಂದ, ಆ ತರಹ ಶಕ್ತಿ ಪ್ರದೇಶಗಳು ಏರ್ಪಾಡಾಗಿದೆ.

ಸಾಮೂಹಿಕ ಧ್ಯಾನವು, ಮಾನವನ ಮತ್ತು ಭೂಗ್ರಹದಿಂದ ಪ್ರಾಣಮಯ ಕೇಂದ್ರಗಳು ತೆರೆದುಕೊಳ್ಳುವುದಕ್ಕೆ, ಕ್ರಿಯಾಶೀಲಗೊಳ್ಳುವುದಕ್ಕೆ ಬಹಳಷ್ಟು ಸಹಕರಿಸುತ್ತಿದೆ. ಸಾಮೂಹಿಕ ಧ್ಯಾನ ಕಾರ್ಯಕ್ರಮಗಳು ಭೂಗ್ರಹದಲೆಲ್ಲಾ ಜರುಗಿದಾಗ, ಆ ಕೇಂದ್ರಗಳು ಸಹಜವಾಗಿ ತೆರೆದುಕೊಂಡು ಕೆಲಸ ಮಾಡುತ್ತಿರುತ್ತದೆ.

## ಒಳ್ಳೆಯ ರಕ್ಷಣ ಕವಚ

ಆಧ್ಯಾತ್ಮಿಕ ಮಾರ್ಗದಲ್ಲಿ ಪ್ರಯಾಣಿಸುವವರಿಗೆ ಸಾಮೂಹಿಕ ಕಾಂತಿವಲಯ ಎನ್ನುವುದು ಒಂದು ದೊಡ್ಡ ರಕ್ಷಣಾಕವಚ ಇದ್ದಂತೆ. ಕೇವಲ ಸಾಮೂಹಿಕ ಧ್ಯಾನ, ಸೇವೆಯಿಂದ ಮಾತ್ರವೇ ಈ 'ಆರಾ' ಸೃಷ್ಟಿಸಲ್ಪಟ್ಟಿದೆ.

ಮುಕ್ತಿಯನ್ನು ಪಡೆಯಬೇಕೆನ್ನುವವರು, ಅವರ ವಿಶ್ವಾಸ, ದಕ್ಷತೆಯು ಬಲವಾಗಿರುತ್ತದೆ, ಕೂಡಿ, ಸಾಮೂಹಿಕ ಧ್ಯಾನ ಮಾಡುವುದರಿಂದ, ಆ ಸಭ್ಯರಲ್ಲಿ ಸೇವಾಭಾವ ಬಲವಾಗುತ್ತದೆ. ಅವರಿಗೆ ಯಥಾರ್ಥ ಜ್ಞಾನವು ಉಂಟಾಗುತ್ತದೆ.

## ಐಕಮತ್ಯವೇ ಮಹಾಬಲ

ಐಕಮತ್ಯವು ಎಂದರೆ ಹೇಗೆ ಇರುತ್ತದೆಯೋ ನಿಜವಾಗಿ ತಿಳಿದುಕೊಳ್ಳಬೇಕು ಎನ್ನುವವರು, ಸಾಮೂಹಿಕ ಧ್ಯಾನದಲ್ಲಿ ಪಾಲ್ಗೊಂಡರೆ, ಅದು ತಿಳಿಯುತ್ತದೆ. ಹಾಗೆ ಕೂಡಿಕೊಂಡು ಧ್ಯಾನ ಮಾಡುವುದರಿಂದ, ಎಲ್ಲರಲ್ಲೂ ಭ್ರಾತೃತ್ವ ಅಂದರೆ ಏನು ಎಂಬುದು ತಿಳಿಯುತ್ತದೆ. ಮಹತ್ತರವಾದ ತ್ಯಾಗವನ್ನು ಕುರಿತು ನಿರ್ಣಯವನ್ನು ತೆಗೆದುಕೊಳ್ಳುವುದು ಕೂಡ ಆಗಲೇ ಸಾಧ್ಯವಾಗುತ್ತದೆ. ಆ ತರಹದ ಧ್ಯಾನವು ಶಾಂತಿ, ಪ್ರೇಮ, ಶಕ್ತಿಗಳ ಒಂದು ಸರೋವರ ಸೃಷ್ಟಿಯಾಗುತ್ತದೆ. ಯಾವ ಸಮಯದಲ್ಲಾಗಲಿ, ಯಾವ ಪರಿಸ್ಥಿತಿಯಲ್ಲಾಗಲಿ ತಮಗೆ ಅಗತ್ಯವಾದ ಶಕ್ತಿಯನ್ನು ಪಡೆಯಬಹುದು.

ಧ್ಯಾನದಿಂದ ನಮ್ಮ ಅಭಿಪ್ರಾಯಗಳನ್ನು ಸರಿಯಾಗಿ ನೋಡಿಕೊಳ್ಳುವುದಕ್ಕೆ, ಸರಿಮಾಡಿಕೊಳ್ಳುವುದಕ್ಕೆ ಸಾಮೂಹಿಕ ಧ್ಯಾನವು ಬಹಳ ಸಹಾಯಮಾಡುತ್ತದೆ. ಬಹಳ ಜನ ತಮ್ಮ ಸ್ವಂತ ಅಭಿವೃದ್ಧಿ ಹೆಚ್ಚಿಸಿಕೊಳ್ಳುವುದಕೋಸ್ಕರ ಮಾತ್ರವೇ ಧ್ಯಾನವನ್ನು ಮಾಡುತ್ತಾರೆ! ಈ ತರಹ ಸ್ವಾರ್ಥ ಪೂರಿತ ವೈಖರಿಯು ನಮ್ಮ ಮನಸ್ಸುಗಳಲ್ಲಿ ಶುದ್ಧಿಮಾಡಬೇಕೆಂದರೆ, ಅದು ಸಾಮೂಹಿಕ ಧ್ಯಾನದಿಂದಲೇ ಸಾಧ್ಯ!

## ಪರಮಗುರುಪೀಠ ಭಗವತ್ ಇಚ್ಛೆ

ಪರಮಗುರುಪೀಠ ಒಂದು ಮಾರ್ಗದರ್ಶಕತ್ವದಲ್ಲಿ ಸಮಸ್ತ ಮಾನವರಿಗೆ ಸೇವೆ ಮಾಡುವುದೆಂದರೆ, ಭಗವಂತನ ಇಚ್ಛೆಯ ಪ್ರಕಾರ ನಡೆದುಕೊಳ್ಳುವುದು. ಅದೇ ಧ್ಯಾನವು. ಅದೇ ಏಕಮಾತ್ರ ಲಕ್ಷ್ಯವೆಂದು ಎಲ್ಲರಿಗೂ ತಿಳಿಯುತ್ತದೆ!

ಈ ವಿಧವಾಗಿ ವ್ಯಕ್ತಿ ಸಾಮೂಹಿಕದಲ್ಲಿ ಒಂದು ಭಾಗವಾಗಿ ಬದಲಾಗಿ ಆಸಮೂಹವನ್ನು ಮಾನವರ ಸೇವೆಗೋಸ್ಕರವೇ ತನ್ನನ್ನು ತಾನು ಒಂದು ಹೊಳೆಯುತ್ತಿರುವ ವಸ್ತುವಿನಂತೆ ರೂಪಿಸಿಕೊಂಡು ತನ್ನ ಸ್ವಂತ ಪ್ರತಿಭೆಯನ್ನು, ಜ್ಞಾನವನ್ನು ದಾಟಿಹೋಗಿ ಉನ್ನತ ದರ್ಶನಾಶಕ್ತಿ ಸ್ಥಾಯಿಗೆ ಬರಲು ಸಹ ಉತ್ತಮವಾಗುತ್ತದೆ.

## ಪರಸ್ಪರ ಸಮಾಚಾರ ಮಾಧ್ಯಮ

ನಾವು ಒಂದು ಸಮೂಹವಾಗಿ ಸೇರಿ ಧ್ಯಾನ ಮಾಡುತ್ತಿರುವಾಗ ಸಮೂಹದಲ್ಲಿಯೇ ಅಲ್ಲದೆ ಅದರ ಸುತ್ತಾ ಸಹ ಒಂದು ಒಳ್ಳೆಯ ವಿದ್ಯುದಯಸ್ಕಾಂತ ಕ್ಷೇತ್ರವು ಏರ್ಪಡುತ್ತದೆ. ಈ ಕ್ಷೇತ್ರವು ಸಭ್ಯರ ಮಧ್ಯೆ ಪರಸ್ಪರ ಸಮಾಚಾರ ಮಾಧ್ಯಮವಾಗಿ ಕೆಲಸ ಮಾಡುತ್ತದೆ. ಯಾವ ಸಭ್ಯನಾದರೂ ಈ ಕ್ಷೇತ್ರದಿಂದ - ಬಲ,

ಪ್ರೇಮ, ಶಾಂತಿ, ಶಕ್ತಿ, ಜ್ಞಾನ, ಧೈರ್ಯ, ಧೃಡತ್ವ, ಆನಂದವನ್ನು ಹೊಂದಬಹುದು. ತನ್ನ ಚೈತನ್ಯ ಸ್ಥಾಯಿಯನ್ನು ಸಹ ಹೆಚ್ಚಿಸಿಕೊಳ್ಳಬಹುದು.

ನಾವು ಸಾಮೂಹಿಕವಾಗಿ ಸೇರಿ, ಒಂದೇ ಭಾವದಿಂದ ಧ್ಯಾನ ಮಾಡುತ್ತಿರುವಾಗ... ಒಂದು ಅಂದವಾದ ವಿದ್ಯುದಯಸ್ಕಾಂತ ಕ್ಷೇತ್ರವು ಏರ್ಪಡುತ್ತದೆ. ಈ ಕ್ಷೇತ್ರವು ಕ್ರಮವಾಗಿ ವಿಸ್ತಾರಗೊಂಡು ನಮ್ಮಲ್ಲಿರುವ ಪ್ರತಿಯೊಬ್ಬರನ್ನು, ಸಮೂಹವೆಲ್ಲವನ್ನು ತುಂಬಿಸಿ, ಒಂದು ಕ್ಷಣವಲಯವನ್ನು ಸಮಕೂಡಿಸುತ್ತದೆ.

ಈ ಶಕ್ತಿ ಕ್ಷೇತ್ರವೇ... ಜ್ಞಾನ, ದಿವ್ಯದರ್ಶನ, ಅಂತರ್-ದೃಷ್ಟಿಗೆ ಮೂಲ. ಯಾವಾಗ ನಾವು ಈ ಕ್ಷೇತ್ರಕ್ಕೆ ಟ್ಯೂನ್ ಆಗುತ್ತೀವೆಯೋ ಆಗ ನಾವು ಅದರಿಂದ ಶಕ್ತಿಯನ್ನು ಹೊಂದುತ್ತೇವೆ.

## ಕಾಂತಿಯಿಂದ ಕೂಡಿದ ಬೃಹತ್ ಭಾವನಾರೂಪ

ಈ ಕ್ಷೇತ್ರವು ಕಾಂತಿಯಿಂದ ಕೂಡಿದ ಒಂದು ಬೃಹತ್ ಭಾವನಾರೂಪವಂಥದ್ದು. ಆ ಸಮೂಹದಲ್ಲಿನ ಪ್ರತಿ ಸಭ್ಯರು ತನ್ನ ನಿಷ್ಕಪಟವಾದ ವಿವೇಕಯುತವಾದ ಬಾಗಿಲಿನಿಂದ ಈ ಭಾವ ರೂಪ ನಿರ್ಮಾಣಕ್ಕೆ ಸಹಕರಿಸುತ್ತಾ ಕ್ರಮವಾಗಿ... ಸೌಂದರ್ಯ, ಹೊಂದಿ, ಲಯದಿಂದ ಕೂಡಿದ ದೊಡ್ಡ ಮೇಘದಂತೆ ಶಕ್ತಿಕ್ಷೇತ್ರವನ್ನು ಏರ್ಪಡಿಸುತ್ತಾರೆ. ಇದು ಒಳ್ಳೆಯದನ್ನು ಮಾಡುವ ಮೇಘ. ಮತ್ತೊಂದು ಕಡೆ ಆಕ್ರಮಣ ಅತಿಆಸೆ, ದ್ವೇಷಗಳು ಇವುಗಳಿಂದ ಏರ್ಪಟ್ಟ ಇತರ ತರಹದ ಮೇಘಗಳು ಇವೆ. ಇವೇ ಯುದ್ಧಗಳು, ಹೊಡೆದಾಟಗಳು, ಸಂಕ್ಷೋಭಗಳಿಗೆ ಮೂಲ. ಪರಮಗುರುಗಳು ಮಾಡುವ ಸಾಮೂಹಿಕ ಧ್ಯಾನವು -ಕಾಂತಿ, ಜ್ಞಾನ, ಪ್ರೇಮ, ಶಕ್ತಿ, ಕೃತಜ್ಞತೆಯಿಂದ ಕೂಡಿದ ಮೇಘಗಳು ಏರ್ಪಡುತ್ತವೆ. ಈ ಮೇಘಗಳನ್ನು ವಿದ್ಯುತ್ತಿನಿಂದ ತುಂಬಿದ ಮಾನಸಿಕ ಪದಾರ್ಥ ಎನ್ನಬಹುದು, ಇದೇ ಅಂತರಿಕ್ಷದಲ್ಲಿ ಒಂದು ಪ್ರಸಾರ ಕೇಂದ್ರವಾಗಿ ಕೆಲಸ ಮಾಡುತ್ತದೆ.

ಈ ಶಕ್ತಿಯುತವಾದ ಭಾವನಾರೂಪದಲ್ಲಿ ಸಂಬಂಧವನ್ನು ಏರ್ಪಡಿಸಿಕೊಳ್ಳುವ ಸಾಮರ್ಥ್ಯ ಇರುವವರು ಇದರಿಂದ ತರಂಗಗಳನ್ನು ಪಡೆದುಕೊಂಡು ಅದರ ವಿಶಿಷ್ಟ ಲಕ್ಷಣಗಳನ್ನು ತಮ್ಮಲ್ಲಿ ತುಂಬಿಕೊಳ್ಳುತ್ತಾರೆ.

ಅಂತರಿಕ್ಷದಲ್ಲಿ... ಒಳ್ಳೆಯ ಕವಿಗಳೂ, ಕಲಾಕಾರರೂ, ಸಂಕಲನಕರ್ತ ಭಾವರೂಪಗಳೂ, ವೈಜ್ಞಾನಿಕ, ತಾತ್ವಿಕ ಭಾವನಾರೂಪಗಳು ಎನ್ನುವ ವಿವಿಧ ಪೂರ್ವ ಪುಣ್ಯದಿಂದ ಯಾವಾಗಲೋ ಇದ್ದವು. ಒಬ್ಬ ವ್ಯಕ್ತಿ ಯಾವಾಗ ಈ ಪೂರ್ವ ಪುಣ್ಯದಿಂದ ಹೊಂದಿರುವ ಸ್ಥಾಯಿಗೆ ಸಿದ್ಧವಾಗುತ್ತಾನೋ, ಆಗ, ಆತನು ಇವುಗಳನ್ನೆಲ್ಲಾ ತೆಗೆದುಕೊಂಡು ಸ್ಫೂರ್ತಿ, ಸೃಜನಾತ್ಮಕವನ್ನು ಹೊಂದುತ್ತಾನೆ.

## ವಿನಾಶಕರ ಸಮೂಹ – ಗ್ರಹದಮೇಲೆ ಕಪ್ಪು ಕಂಬಳಿ

ನಮ್ಮಲ್ಲಿ ಪ್ರತಿಯೊಬ್ಬರೂ ಸಹ ಉನ್ನತ ಭಾವನಾರೂಪವನ್ನು ಮತ್ತು ನಿರ್ಮಾಣವನ್ನು ಮತ್ತಷ್ಟು ಶಕ್ತಿಯುತಗೊಳಿಸಲು ಕೃಷಿ ಮಾಡುತ್ತಾ ಒಂದು ವಿಷಯವನ್ನು ಗಮನಿಸುತ್ತಾ ಇರಬೇಕು... ಸ್ವಲ್ಪಮಟ್ಟಿಗಾದರೂ ಗಮನಿಸಿ ನೋಡಿದ್ದಾಗ, ಒಂದು ಕಡೆ ನಾವೆಲ್ಲಾ ಎಲ್ಲರ ಕ್ಷೇಮವನ್ನು ಕೇಳಿ ಒಳ್ಳೆಯ ಭಾವನಾರೂಪವನ್ನು ನಿರ್ಮಿಸುತ್ತಿದ್ದರೆ, ಮತ್ತೊಂದು ಕಡೆ, ತಮ್ಮ ನೀಚವಾದ ಚೇಷ್ಟೆಯ, ಭಾವಗಳ ಇಚ್ಛೆಗಳಿಂದ ವಿಕೃತವಾದ ಭಾವನಾರೂಪವನ್ನು ಮತ್ತಷ್ಟು ಶಕ್ತಿಯುತಗೊಳಿಸಲು ರಾತ್ರಿ ಹಗಲು ತಾಪತ್ರಯ ಪಡುವವರೂ ಇದ್ದಾರೆ ಎಂಬ ವಿಷಯ ತಿಳಿಯುತ್ತದೆ.

ದುರದೃಷ್ಟವಶಾತ್ ಈ ತರಹ ನೀಚ ಭಾವನೆಯ ರೂಪವನ್ನು ಕಡಿಮೆ ಸ್ಥಾಯಿಯ ಪ್ರಕಂಪನೆಗಳು ಉಂಟಾಗಿ, ಉನ್ನತ ಸ್ಥಾಯಿ ಭಾವನಾರೂಪಗಳಿಗಿಂತ ಮತ್ತಷ್ಟು ಹತ್ತಿರವಾಗಿದ್ದುದು ಎಂದು ಕೊಳ್ಳುವುದಕ್ಕೆ ಸುಲಭವಾಗಿದೆ. ಈಗ ಪ್ರಪಂಚದಲ್ಲಿ ಒಟ್ಟು ಮನುಷ್ಯರು ಹೆಚ್ಚಾಗಿ ಇರುವುದರಿಂದ, ಅಂದರೆ, ಉನ್ನತವಾದ ಆಲೋಚನೆ ಮಾಡದವರು ಈ ನೀಚ ಭಾವನಾರೂಪವನ್ನು ಹಿಡಿದುಕೊಳ್ಳುವವರ ಸಂಖ್ಯೆ ಹೆಚ್ಚಾಗಿ ಇದೆ, ಆದ್ದರಿಂದಲೇ, ಪ್ರಪಂಚವು ಈ ರೀತಿ ಇದೆ.

## ವಿಶ್ವೈಕ ಪ್ರಕ್ಷಾಳನ ಮಾರ್ಗ – ಸಾಮೂಹಿಕ ಧ್ಯಾನ

ನಾ ಮುಂದೆ, ತಾ ಮುಂದೆ ಎಂಬಂತೆ, ಎಲ್ಲ ದೇಶಗಳೂ ಈ ವಿಕಾರ ಮನೋಭಾವನೆಯನ್ನು ಬೆಳೆಸುತ್ತ ನಮ್ಮ ಸುಂದರ ಭೂಗ್ರಹಕ್ಕೆ ಅದರ ಕಪ್ಪು ಹೊದಿಕೆಯನ್ನು ಹಾಕಿಬಿಟ್ಟಿದ್ದಾರೆ. ನಾವು ಊಹಿಸಿಕೊಳ್ಳಲಾಗದಷ್ಟು ವಿಕೃತವಾಗಿಬಿಟ್ಟಿದೆ ಎಂಬ ವಿಚಾರ ನಾವು ತಿಳಿಯುವ ಅಗತ್ಯವಿದೆ. ಅದನ್ನು ತಿಳಿದಾಗ, ಈ ವಿಕೃತ ಮನೋಭಾವನೆಯಿಂದ ಉಂಟಾಗುವ ಅಪಾಯಗಳನ್ನು ತಡೆಗಟ್ಟುವ ಮಾರ್ಗವನ್ನು ತಿಳಿಯಬಹುದು. ಆ ಮಾರ್ಗವೇ "ಸಾಮೂಹಿಕ ಧ್ಯಾನ".

ಧ್ಯಾನ ಎನ್ನುವುದು ಅಂಧಕಾರ, ಮೃತ್ಯು, ಅಸತ್ಯ ಬೇರೆ ಬೇರೆ ಮುಗ್ಗಟ್ಟುಗಳಿಂದ ಮಾನವರನ್ನು ವಿಮುಕ್ತಿ ಮಾಡುತ್ತದೆ. ಇದೇ ಸಾಮೂಹಿಕ ಧ್ಯಾನದ ಒಂದು ಪರಮ ಗುರಿ.

ಧ್ಯಾನ ಸಮೂಹದಲ್ಲಿ ಪ್ರತಿ ವ್ಯಕ್ತಿ ತನ್ನ ಆಲೋಚನೆಗಳನ್ನು ವಿಧಿಯಾಗಿ ಗಮನಿಸುತ್ತಾ ಇರಬೇಕು. ಅಷ್ಟೇ ಅಲ್ಲ, ತನ್ನ ನಿತ್ಯ ಜೀವನವನ್ನು ಪ್ರೇಮ, ಕೃತಜ್ಞತೆ, ಸಹಕಾರ, ಸತ್ಸಂಬಂಧಗಳಿಂದ ತುಂಬಿಕೊಳ್ಳಬೇಕು. ಹಾಗೆ ನಡೆದರೆ ಮಾತ್ರ ನಾವು ದ್ವೇಷದ ಸ್ಥಾನದಲ್ಲಿ ಪ್ರೇಮವನ್ನು, ಗೊಂದಲದ ಸ್ಥಾನದಲ್ಲಿ ಸಾಮರಸ್ಯವನ್ನು ಮತ್ತೆ ಹೊಂದಬಲ್ಲೆವು.

" ಸಿಂಫೊನೀ ಆಫ್ ದಿ ಜೋಡಿಯಾಕ್ ದಿಂದ "
ಗ್ರಂಥಕರ್ತ: ಟೋರ್ಕೋಮ್ ಸೆರಾಯ್‌ಡಾರಿಯನ್
ಕನ್ನಡಕ್ಕೆ: ತುಳಸೀ ಕೆ. ಮೂರ್ತಿ

# ಪಿರಮಿಡ್ ವ್ಯಾಲಿಯಲ್ಲಿ ಪತ್ರೀಜಿ

ಬೆಂಗಳೂರಿನಲ್ಲಿ ನವೆಂಬರ್ 1ರಿಂದ 3ರವರೆಗೆ ಸುದಿನಗಳು. ಏಕೆಂದರೆ, ಎಂದಿನಂತೆ ಪತ್ರೀಜಿ ಅವರು ತಮ್ಮ ಅಮೂಲ್ಯವಾದ ಸಮಯನ್ನು ಇಲ್ಲಿ ಕಳೆದರು. 1ನೇ ತಾರೀಖು ಪತ್ರೀಜಿ ಅವರು ಕರ್ನೂಲ್‌ನಿಂದ ಬೆಂಗಳೂರಿಗೆ ಬಂದರು. ಮೊದಲಿಗೆ ಅವರ ಧ್ಯಾನ ತರಗತಿ CMRS ಪಿರಮಿಡ್ ಸ್ಪಿರಿಚ್ಯುವಲ್ ಕೇರ್ ಸೆಂಟರ್‌ನಲ್ಲಿ 10-12ರ ವರೆಗೆ ನಡೆಯಿತು. ಅಲ್ಲಿ ಪತ್ರೀಜಿ ನೀಡಿದ ಸಂದೇಶಗಳೇನಂದರೆ

- 95% ನಮ್ಮ ಯೋಚನೆಗಳು, ಮಾತು, ಕರ್ಮ, ಎಲ್ಲ ಅನಾವಶ್ಯಕವಾದದ್ದು. ಕೇವಲ 5% ಯೋಚನೆ, ಮಾತು, ಕರ್ಮ, ಉತ್ತಮ ಜೀವನಕ್ಕೆ ಅವಶ್ಯಕವಾಗಿದೆ. ಆದರೆ, ಅದು 5%ನಿಂದ 100%ಗೆ ಬೆಳೆಯಬೇಕು. 5% ಬುದ್ಧತ್ವ 100% ಬುದ್ಧತ್ವಕ್ಕೆ ಬೆಳೆಯುತ್ತದೆ. ಬೆಳೆಯಬೇಕೆಂದರೆ ಧ್ಯಾನ ಮಾಡಲೇಬೇಕು.
- ಧ್ಯಾನ ಸೂರ್ಯನನ್ನು ಪ್ರತಿನಿಧಿಸಿದರೆ, ಯೋಗ ಚಂದ್ರನ ಹಾಗೆ ಆಧ್ಯಾತ್ಮಿಕತೆ ದೇಹಕ್ಕೆ ಸಂಬಂಧಿಸಿದ್ದಲ್ಲ, ದೈಹಿಕ ಯೋಗ ಆಧ್ಯಾತ್ಮಿಕತೆ ಅಲ್ಲ. ನಿಮಗೆ ಆಧ್ಯಾತ್ಮಿಕ ಸಾಧನೆ ಬೇಕಿದ್ದಲ್ಲಿ ಧ್ಯಾನ ಒಂದೇ ಅದಕ್ಕಿರುವ ಮಾರ್ಗ ಹೊರತು ಯಾವುದೇ ದೈಹಿಕ ಕಸರತ್ತು ಅಲ್ಲ. ಸೂರ್ಯನ ಬೆಳಕು ಇಲ್ಲದಿದ್ದರೆ ಚಂದ್ರ ಇಲ್ಲ, ಆದ್ದರಿಂದ, ಧ್ಯಾನವನ್ನು ಜೀವನದಲ್ಲಿ ಅಳವಡಿಸಿಕೊಳ್ಳಿ.
- ಉತ್ತಮವಾದ ಆಧ್ಯಾತ್ಮಿಕ ಪುಸ್ತಕಗಳನ್ನು ಓದುವುದರಿಂದ ನಮ್ಮ ಮನಸ್ಸಿನ ಸ್ಥಿತಿ ಬದಲಾಗುತ್ತದೆ. ಮನಸ್ಸು ಬದಲಾದಾಗ ಜೀವನದ ಪರಿಸ್ಥಿತಿಗಳು ಬದಲಾಗುತ್ತವೆ. ಮನಸ್ಸಿನ ಸ್ಥಿತಿಯು ಅದಕ್ಕೆ ತಕ್ಕ ಜೀವನದ ಸ್ಥಿತಿಗತಿಗಳನ್ನು ಸೃಷ್ಟಿಸುತ್ತದೆ (Mind attracts related life situations).
- ಧ್ಯಾನ, ಸರಿಯಾದ ಪುಸ್ತಕ ಓದುವುದು ಹಾಗೂ ಮಾಸ್ಟರ್‌ಗಳ ತರಗತಿಗಳನ್ನು ಕೇಳುವುದರಿಂದ ನಮ್ಮ ಮನಸ್ಸು ಬದಲಾಗುತ್ತದೆ, ಉತ್ತಮಗೊಳ್ಳುತ್ತದೆ.
- ನಾವು ಶರೀರವಲ್ಲ ಅಥವಾ ಉಸಿರಲ್ಲ. ನಾವೆಲ್ಲಾ ಆತ್ಮ ಜೀವಿಗಳು. ಆತ್ಮ ಸ್ಥಿತಿಯಲ್ಲಿರುವುದೇ ಆಧ್ಯಾತ್ಮಿಕತೆ. ದೇವಾಲಯಗಳನ್ನು ಪ್ರದಕ್ಷಿಣೆ ಮಾಡುವುದು, ನಮಸ್ಕಾರಗಳು ಇತ್ಯಾದಿ ಕೇವಲ ದೈಹಿಕ ವ್ಯಾಯಾಮಗಳು. ಆದ್ದರಿಂದ, ನಿಜವಾದ ಆಧ್ಯಾತ್ಮಿಕ ಸಾಧನೆಯಾದ 'ಧ್ಯಾನ'ವನ್ನು ಜೀವನದಲ್ಲಿ ಅಳವಡಿಸಿಕೊಳ್ಳಿ.

ಸಂಜೆ ವೈಟ್‌ಫೀಲ್ಡ್‌ನ ಶ್ರೀ ರಾಮಧಾಮದಲ್ಲಿ ಪತ್ರೀಜಿ ಅವರ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಇಲ್ಲಿ ಮೊದಲಿಗೆ ಭೀಮೇಶ್ ರೆಡ್ಡಿಯವರು ಎಲ್ಲರನ್ನೂ ಸ್ವಾಗತಿಸಿ, ಶ್ರೀರಾಮಧಾಮದಲ್ಲಿ ಪಿರಮಿಡ್ ಧ್ಯಾನದ ತರಗತಿಗಳಿಗೆ ಅನುಕೂಲ ಮಾಡಿಕೊಟ್ಟ ಶ್ರೀನಿವಾಸರವರಿಗೆ ಕೃತಜ್ಞತೆ ಸಲ್ಲಿಸುವ ಮೂಲಕ ತಮ್ಮ ಭಾಷಣ ಪ್ರಾರಂಭಿಸಿದರು. "ಧ್ಯಾನ ಜಗತ್" ಏಕೇ ಬೇಕು. ಅದರ ಅವಶ್ಯಕತೆ ಬಹಳಷ್ಟು ಇದೆ ಎಂದು ಅವರು ವಿವರಿಸಿದರು. ನಂತರ, ಪತ್ರೀಜಿ ಅವರು ಧ್ಯಾನ ತರಗತಿಯನ್ನು ಶುರುಮಾಡಿದರು.

- ಆಧ್ಯಾತ್ಮಿಕತೆ ಅಂದರೆ ಏನು?
  - ನಾವು ಶರೀರವಲ್ಲ, ಆತ್ಮ ಎಂದು ತಿಳಿಯುವುದೇ ಆಧ್ಯಾತ್ಮಿಕತೆ.
- ಧ್ಯಾನ ಎಂದರೇನು?
  - ನಾವು ಏನೂ ತಿನ್ನದಿದ್ದರೆ - "ಉಪವಾಸ" ಎನ್ನುತ್ತೇವೆ.<br>ನಾವು ಮಾತನಾಡದಿದ್ದರೆ - "ಮೌನ" ಎನ್ನುತ್ತೇವೆ.<br>ನಮ್ಮ ಮನಸ್ಸು ಶೂನ್ಯ ಮಾಡಿದರೆ - ಅದು "ಧ್ಯಾನ"
- ಆದರೆ, ಈ ಯೋಚನೆಗಳನ್ನು ತೆಗೆಯುವುದು ಹೇಗೆ?
- ಸಾಧ್ಯ-ಸಾಧ್ಯವಿಲ್ಲ-ಅಲ್ಲವೆ?
  - ಆದರೆ, ಸಾಧ್ಯ -ಸೂಕ್ಷ್ಮ ತಂತ್ರದಿಂದ.
- ನೀವು ಅದನ್ನು ತಿಳಿಯಬೇಕೇ?
  - ನಾನು ಕಲಿಸುತ್ತೇನೆ, ನೀವು ಕಲಿತು, ಕನಿಷ್ಠ 100 ಮಂದಿಗೆ ಕಲಿಸಬೇಕು.
- ಆ ತಂತ್ರವೇ "ಆನಾಪಾನಾಸತಿ"
- ಹನುಮಾನ್ 2ವರ್ಷದ ಬಾಲಕನಾಗಿದ್ದಾಗ, ತನ್ನ ತಾಯಿ ಅಂಜನಾದೇವಿ ಹೇಳಿದ ಮಾತು.
  - "ನೀನು ಸಾಕಷ್ಟು ದೊಡ್ಡವನಾಗಿ ಬೆಳೆದಿದ್ದೀಯ ಇಂದಿನಿಂದ ನಾನು ಹಾಗೂ ನಿನ್ನ ತಂದೆ, ನಿನ್ನ ತಾಯಿ -ತಂದೆ 'ಅಲ್ಲ'" ಎಂದು ಹೇಳಿದಳು.
- ಆಗ ಬಾಲಕ ಹನುಮಾನ್ ಕೇಳಿದ "ಹಾಗಾದರೆ ನಾನು ಯಾರ ಮಗ"?
  - "ವಾಯುಪುತ್ರ, ಪವನ ಪುತ್ರ, ಶ್ವಾಸಪುತ್ರ - ತಾಯಿಯ ಪುತ್ರನಲ್ಲ"
- ಈಗ ಕೈ ಬೆರಳು ಪರಸ್ಪರ ಜೋಡಿಸಿ, ಕಣ್ಣು ಮುಚ್ಚಿ ನಿನ್ನ ಪೋಷಕನಾದ, ನಿನ್ನ ಶ್ವಾಸವನ್ನು ಗಮನಿಸು ಎಂದು ಮಾರ್ಗದರ್ಶನ ನೀಡಿದಳು.

- ಆಗ ಆ ಬಾಲಕ ಅತ್ಯುನ್ನತ ಮಟ್ಟದ ಧ್ಯಾನಿಯಾದ.

- ನೀವೇನು ಮಾಡುತ್ತಿದ್ದೀರಿ? ಆಂಜನೇಯನಿಂದ ಏನು ಕಲಿತಿರಿ?
  - ಧ್ಯಾನ ಎಂದರೆ ವಾಯುಪುತ್ರನಾಗುವುದು.
  - ಪವನಪುತ್ರರಾದಾಗ (ಉಸಿರನ್ನು ಗಮನಿಸಿದಾಗ) ರಾಮನ (ಆತ್ಮ) ಹತ್ತಿರ ಹೋಗುತ್ತೀರ. ಲಕ್ಷ್ಮಣ ರೇಖೆ ಎಂದರೆ ಬುದ್ಧಿ ರೇಖೆ.
  - ಉದಾಹರಣೆಗೆ, ಹಸಿವಿಗೆ ತಕ್ಕಷ್ಟು ತಿನ್ನಬೇಕು. ಹೆಚ್ಚು ತಿಂದರೆ ತೊಂದರೆ.
  - ಸೀತೆ ಎಂದರೆ ಆತ್ಮದ ಒಂದು ಶಕ್ತಿ ಆನಂದ, ಮನಸ್ಸು ಎಂದರೆ ಹತ್ತು ತಲೆಯ 'ರಾವಣ'.
  - ಸೀತೆ ಇದ್ದರೆ ರಾಮನಿಗೆ (ಆತ್ಮಕ್ಕೆ) ಆನಂದ. ಸೀತೆ ಇಲ್ಲದಿದ್ದರೆ, ದುಃಖ, ಬೇಸರ.
  - ರಾವಣ (ಮನಸ್ಸು) ಬಂದು ಸೀತೆಯನ್ನು ತೆಗೆದುಕೊಂಡು ಹೋದಾಗ ರಾಮನಿಗೆ (ಆತ್ಮ) ದುಃಖ. ಆಗ ಆಂಜನೇಯ (ಉಸಿರು) ಸಹಾಯದಿಂದ ಸೀತ (ಸಂತೋಷ) ಲಭ್ಯ.
  - ನಿಮಗೆ ಶಾಶ್ವತವಾದ ಮನಶ್ಶಾಂತಿ ಬೇಕೆ? ಹಾಗಾದರೆ ವಾಯುಪುತ್ರರಾಗಿ ನಿಮ್ಮ ಸೀತೆಯನ್ನು ಹುಡುಕಿಕೊಳ್ಳಿ.
  - ಲಕ್ಷ್ಮಣ ರೇಖೆ ದಾಟಲು, ರಾವಣ ಹೇಳುತ್ತಾನೆ. ಅಂದರೆ, ನಿಮ್ಮ ಮನಸ್ಸು ಮಿತಿ ದಾಟಲು ಪ್ರೇರೇಪಿಸುತ್ತದೆ.
  - ಉದಾಹರಣೆಗೆ, 2 ಜಿಲೇಬಿ ತಿನ್ನುವ ಬದಲು 3 ತಿಂದರೆ ಶಾಂತಿ, ಆರೋಗ್ಯ ಹೋಗುತ್ತೆ. ಆದರಿಂದ, ಲಕ್ಷ್ಮಣ ರೇಖೆ ಒಳಗೆ ಇರಿ.
  - ಬುದ್ಧಿ ಹೇಳುತ್ತೆ, ರೇಖೆಯ ಒಳಗೆ ಇರಲು. ಆದರೆ, ಮನಸ್ಸು ದಾಟಲು ಹೇಳುತ್ತದೆ.
  - ಬುದ್ಧಿ ಹೇಳುತ್ತದೆ ಹೆಚ್ಚು ಧ್ಯಾನ ಮಾಡು ಎಂದು. ಆದರೆ, ನಾವು ಲಕ್ಷ್ಮಣ ರೇಖೆ ದಾಟುತ್ತೇವೆ.
  - ಈಗ ಎಲ್ಲರೂ ಆಂಜನೇಯರಾಗೋಣ ಎಂದು 40 ನಿಮಿಷ ಧ್ಯಾನ ಮಾಡಿಸಿದರು. ಇದರ ನಂತರ, ಈಗ ಎಲ್ಲರೂ ಹನುಮಾನ್ ರಾಗಿದ್ದೇವೆ ಎಂದು ಹೇಳಿದರು.
  - ಎಲ್ಲರೂ ಪಿರಮಿಡ್ ವ್ಯಾಲಿಗೆ ಬರಬೇಕೆಂದು ಆಹ್ವಾನಿಸಿದರು. ಎಲ್ಲರೂ ಅಲ್ಲಿಗೆ ಬಂದು ಧ್ಯಾನ ಮಾಡಬೇಕು ಎಂದು ಹೇಳಿದರು.
  - ಸಂಜೀವಿನಿಯಿಂದ ಹಿಮಾಲಯದಷ್ಟು ಆರೋಗ್ಯ ಸಿಗುತ್ತದೆ ಎಂದರ್ಥ. ಧ್ಯಾನ ಒಂದು ಸಂಜೀವಿನಿ ವಿದ್ಯೆ. ಆದ್ದರಿಂದ, ಡಾಕ್ಟರ್ ಬಳಿ ಹೋಗದೆ, ಧ್ಯಾನ ಮಾಡಿ ಆರೋಗ್ಯದಿಂದ ಇರಿ. "ಆನಾಪಾನಸತಿಯೇ ಸಂಜೀವಿನಿ ವಿದ್ಯೆ"
  - ಡಾಕ್ಟರ್ ಇಲ್ಲ, ಔಷಧಿ ಇಲ್ಲ, ಧ್ಯಾನದಿಂದಲೇ ಪೂರ್ಣ ಆರೋಗ್ಯ. ಎಲ್ಲರಿಗೂ ಧನ್ಯವಾದ ಎಂದು ಅಲ್ಲಿಗೆ ತರಗತಿ ಮುಗಿಸಿದರು.

ಅಲ್ಲಿಂದ ಹೊರಟು ವ್ಯಾಲಿಗೆ 8:30ಕ್ಕೆ ಬಂದರು. ಚಿಕ್ಕಕೆರೆಯಿಂದ ಬಂದ 48 ಧ್ಯಾನಿಗಳು ಹಾಗು ಇತರೆ ಸುಮಾರು ಧ್ಯಾನಿಗಳು ಅಲ್ಲಿ ಕಾತುರದಿಂದ ಕಾಯುತ್ತಿದ್ದರು. ಪತ್ರೀಜಿ ಅವರು ಬಂದ ನಂತರ, 9:30ರಿಂದ 10:30ರವರೆಗೆ ಪಿರಮಿಡ್‌ನಲ್ಲಿ ಧ್ಯಾನ ಮಾಡಿಸಿದರು. ನಂತರ, ಸುಮಾರು ಧ್ಯಾನಿಗಳು ಹುಣ್ಣಿಮೆ ಧ್ಯಾನವನ್ನು ಮುಂದುವರಿಸಿದರು.

ನವೆಂಬರ್ 2ನೇ ತಾರೀಖು ಬಹಳ ಜನ ವ್ಯಾಲಿಗೆ ಭೇಟಿಕೊಟ್ಟರು. ಎಲ್ಲರೂ ತಮ್ಮ ಸಂದೇಹಗಳನ್ನು ಪತ್ರೀಜಿ ಅವರ ಹತ್ತಿರ ಬಗೆಹರಿಸಿಕೊಂಡರು. ಅದು ಒಂದು ಬಹಳ ಒಳ್ಳೆಯ ದಿನ. ಕಾರ್ತಿಕ ಪೂರ್ಣಿಮಿ ಸಂಜೆ 7:30ರಿಂದ 8:30ರವರಿಗೆ ಧ್ಯಾನಮಾಡಿಸಿದರು. ಧ್ಯಾನದ ಸಮಯದಲ್ಲಿ ಎಲ್ಲರೂ ಬಹಳ ಶಕ್ತಿಯನ್ನು ಅನುಭವಿಸಿದರು. ಅಲ್ಲಿ ಒಂದು ಸಂದೇಶವನ್ನು ನೀಡಿದರು "ಈ ಕ್ಷಣದಲ್ಲಿ ಜೀವಿಸಬೇಕು, ತಕ್ಷಣವೇ ಆಕ್ಷಣದಿಂದ ಹೊರಬರಬೇಕು". ನಂತರ, ಆತ್ಮಜ್ಞಾನಿಗಳ ಮದುವೆ ಸಮಾರಂಭ ನಡೆಯಿತು. ಬಾಲಾಜಿ ಎಂಬ ಚೆನ್ನೈನ ಪೈಮಾ ಮಾಸ್ಟರ್ ಹಾಗೂ ಲಕ್ಷ್ಮಿ ಎಂಬ ಬೆಂಗಳೂರು ಪೈಮಾ ಮಾಸ್ಟರ್‌ಗಳ ಮದುವೆಯು ಪತ್ರೀಜಿ ಹಾಗು ಯೋಗಿಗಳ ಮಧ್ಯೆ ವಿಜೃಂಭಣೆಯಿಂದ ನಡೆಯಿತು. ಅಲ್ಲಿ ಪೈಮ ಮಾಸ್ಟರ್ಸ್, ನೃತ್ಯ, ಸಂಗೀತ ಇವುಗಳಿಂದ ಮದುವೆಗೆ ಶೋಭೆ ತಂದರು. ಅಲ್ಲಿಗೆ ಈ ದಿನದ ಕಾರ್ಯಕ್ರಮಗಳು ಮುಗಿದವು.

ನವೆಂಬರ್ 3ನೇ ತಾರೀಖು ಬ್ರಹ್ಮರ್ಷಿ ಪತ್ರೀಜಿ ಅವರು ವ್ಯಾಲಿಯಿಂದ ಹೊರಟು ಬೆಂಗಳೂರಿನಲ್ಲಿರುವ ಕರ್ನಾಟಕ ಪಿರಮಿಡ್ ಧ್ಯಾನ ಪ್ರಚಾರ ಟ್ರಸ್ಟ್ (ರಿ) ಕಛೇರಿಗೆ ಆಗಮಿಸಿ ಅಲ್ಲಿನ ಕಾರ್ಯ ಕಲಾಪಗಳ ವಿವರಗಳನ್ನು ಪಡೆದರು. ಅಲ್ಲಿಂದ ಚಿಕ್ಕಬಳ್ಳಾಪುರಕ್ಕೆ ಹೊರಟರು.

- ಸುಧಾಕರ್ ರೆಡ್ಡಿ
ಬೆಂಗಳೂರು

ಥಾಮಸ್ ಕಲಂ ಟಿ ಕಾಲಂ

# ನಗಿಸುವುದು ಒಂದು ಯೋಗ

ನಗುವುದು ಒಂದು ಭೋಗ, ನಗಿಸುವುದೇ ಒಂದು ಯೋಗ. ನಗದಿರುವುದೇ ಒಂದು ರೋಗ! ಎನ್ನುತ್ತಾರೆ ಸುಪ್ರಸಿದ್ಧ ತೆಲುಗಿನ ಮಹಾ ನಿರ್ದೇಶಕರಾದ ಧಿ. ಜಂಧ್ಯಾಲರವರು. ಅವರ ಸುಮಾರು ಚಿತ್ರಗಳು ಹಾಸ್ಯ ಪ್ರಾಧಾನವಾಗಿರುತ್ತಿದ್ದವು. 'ಜಂಧ್ಯಾಲ ಮಾರ್ಕ್' ಸಿನಿಮಾ ಎಂದರೇನೇ ನಗು ಎಂದರ್ಥ ಎನ್ನುತ್ತಿದ್ದರು. ಸಿನಿಮಾ ಪ್ರೇಮಿಗಳು. ನಿಜವಾಗಲೂ ನಗುವುದು ಒಂದು ಭೋಗವೇ ಸರಿ. ಅದಕ್ಕೇ ನಕ್ಕರೆ ಅದೇ ಸ್ವರ್ಗ ಎನ್ನುತ್ತಾರೆ. ಮನಸಾರೆ ನಗುವವರ ಮೊಗವ ನೋಡಾ! ಎನ್ನುತ್ತಾರೆ ಯಾರು ಮನಸಾರೆ ನಗುತ್ತಾರೆ. ಅಂಥವರ ಹತ್ತಿರ ಆರೋಗ್ಯ ಮನೆ ಮಾಡಿಕೊಂಡಿರುತ್ತದೆ. ಕೆಲವರು ಮನಸ್ಸಿನಿಂದ ನಗದೇ ದೇಹದಿಂದ ನಗುತ್ತಾರೆ, ಅದು ನಕ್ಕವರಂತೆ ನಟಿಸುವುದೇ ಆಗುತ್ತದೆ. ಹಾಗೆ ನಕ್ಕರೆ ಕೆಮ್ಮು ಬರಬಹುದೇನೋ ವಿನಃ ಮನಸ್ಸು ಪ್ರಶಾಂತವಾಗುವುದಿಲ್ಲ.

ಆಧ್ಯಾತ್ಮಿಕ ಜೀವಿಗಳು ನಗಬಾರದೆಂದು ತೀರ್ಮಾನಿಸಿರುತ್ತಾರೆ. ಯಾರೇ ನಕ್ಕರು ತಮಗೂ ನಗು ಬಂದರೂ ನಗುವುದೇ ಇಲ್ಲ. ಆಧ್ಯಾತ್ಮಿಕವಾಗಿ ಬದಲಾಗಿದ್ದೇನೆ, ಆದ್ದರಿಂದ ನಾನು ಗಂಭೀರವಾಗಿರಬೇಕೆಂದು ಅಂದುಕೊಂಡಿರುತ್ತಾರೆ. ಗಂಭೀರವಾಗಿರುವುದು ನಟನೆಯಾದರೆ, ನಗುವೆಂಬುದು ಸಹಜವಾದದ್ದು. ಕೋಗಿಲೆ ಹಾಡುವುದು ಸಹಜ. ಗುಲಾಬಿ ಹೂ ಅರಳುವುದು ಸಹಜ. ಪ್ರಭಾತ ಕಾಲದಲ್ಲಿ ಅರುಣೋದಯ ವೇಳೆಯಲ್ಲಿ ರವಿ ಉದಯಿಸುವುದು ಸಹಜ. ಹುಣ್ಣಿಮೆಯ ವೇಳೆಯಲ್ಲಿ ಸಾಗರ ಉಕ್ಕುವುದು ಸಹಜ ಉಷೆ ಜಾರಿ ನಿಷೆ ಉದಯಿಸಿದ ಮೇಲೆ ನಕ್ಷತ್ರಗಳ ಗೋಚರವೂ ಸಹಜವೇ. ಈ ಎಲ್ಲಾ ಸಹಜಗಳಂತೆ ನಗುವುದೂ ಸಹ ಅತ್ಯಂತ ಸಹಜವೇ.

ಆದರೆ, ನಾವೆಂದೂ ಸಹಜವಾಗಿರುವುದೇ ಇಲ್ಲ ಅಸಹಜವಾಗಿರಲು ಕಷ್ಟಪಡುತ್ತಿರುತ್ತೇವೆ. ಎಲ್ಲಿ ಅಸಹಜವಿರುತ್ತದೋ ಅಲ್ಲಿ ಕಷ್ಟವಿರುತ್ತದೆ. ಮಲ್ಲಿಗೆ ಹೂವನ್ನು ಅರಳಿಸಬೇಕಾಗಿಲ್ಲ ಪ್ರತಿ ಹೂವು ಅರಳುವುದು ಸಹಜ. ಅರಳಿದ ಪ್ರತಿ ಹೂವಿನಿಂದ ಮಕರಂದದ ಪರಿಮಳ ಚೆಲ್ಲುವುದು ಸಹಜ. ಸಹಜವಾಗಿರಲು ಯಾರೂ ಕಷ್ಟಪಡಬೇಕಾಗಿಲ್ಲ, ಅಸಹಜವಾಗಿರುವುದಕ್ಕೋಸ್ಕರವೇ ಕಷ್ಟಪಡಬೇಕು. ಕಷ್ಟವಾದ ಕೆಲಸಗಳನ್ನು ಮಾಡುತ್ತಿದ್ದರೆ, ಯಾರಿಗಾದರೂ ನಗುಬರುತ್ತದೆಯೇ? ಅದಕ್ಕಾಗಿ ನಗುವುದು ತುಂಬಾ ಕಡಿಮೆ.

ನೂರಕ್ಕೆ 98 ಜನರ ಜೀವನದಲ್ಲಿ ನಗುವಿಗೆ ಆಸ್ಪದವೇ ಇರುವುದಿಲ್ಲ. ಯಾರಾದರೂ ನಗುತ್ತಿದ್ದರೆ, ಅವರನ್ನು ನೋಡಿ ಅಂದುಕೊಳ್ಳುತ್ತಾರೆ ಇವನೆಂಥ ಅದೃಷ್ಟವಂತ ಎಂದು. ನಗಲು ಅದೃಷ್ಟಮಾಡಿರಬೇಕಾಗಿಲ್ಲ, ಆದರೆ, ಅಳುವುದು ಮಾತ್ರ ದುರದೃಷ್ಟವೇ ಸರಿ. ಬಹಳದಿನಗಳ ನಂತರ ಸ್ನೇಹಿತರು ಸಿಕ್ಕರೆ, ಅಥವಾ ನಮ್ಮ ಮೆಚ್ಚಿನ ಬಂಧುಗಳು ಮನೆಗೆ ಬಂದಿದ್ದರೆ, ಅವರ ಹತ್ತಿರ ಕುಳಿತು ಮಾತನಾಡುತ್ತಿದ್ದಾಗ, ಅವರು ಹೇಳುತ್ತಿರುವ ಕೆಲವು ಘಟನೆಗಳು ಅಥವಾ ಸಂದರ್ಭಗಳು ನಗುವಿನೊಂದಿಗೆ ಕೂಡಿದ್ದರೆ, ಆ ದಿನ ಮನಸಾರೆ ನಗುತ್ತೇವೆ. "ಈ ರೀತಿ ನಕ್ಕು ಆದೆಷ್ಟು ದಿನಗಳಾಯಿತೋ" ಎನ್ನುತ್ತೇವೆ. ಒಂದು ರೀತಿಯಲ್ಲಿ ನಗುವುದನ್ನು ಮರೆತುಬಿಟ್ಟಿದ್ದೇವೆ ಎಂದೇ ಅರ್ಥ. ಸಹಜತ್ವದಿಂದ ದೂರ ಸರಿದಿದ್ದೇವೆ ಎಂಬುದು ನಿಜ.

ಮಗುವಾಗಿದ್ದಾಗ ಆರು ತಿಂಗಳವರೆಗೆ ದಿನಕ್ಕೆ ನಾಲ್ಕು ನೂರು ಸಾರಿ ನಗುತ್ತೇವೆ. ಮೂರು ವರ್ಷಕ್ಕೆ ನೂರಾ ಇಪ್ಪತ್ತುಸಾರಿ ನಗುತ್ತೇವೆ. ಏಳು ವರ್ಷಕ್ಕೆ ಅರವತ್ತುಸಾರಿ ನಕ್ಕರೆ, ಹದಿನೆಂಟು ವರ್ಷಕ್ಕೆ ನಲವತ್ತುಸಾರಿ ನಗುತ್ತೇವೆ. ನಂತರ, ಮದುವೆಯಾದ ಮೇಲೆ ನಗುವುದನ್ನೇ ಮರೆಯುತ್ತೇವಂತೆ. ಇದು ಮನಃಶಾಸ್ತ್ರಜ್ಞರ ಲೆಕ್ಕಾಚಾರ. ನಗುವುದರಿಂದ ದೇಹಕ್ಕೆ ಹೆಚ್ಚು ಆಮ್ಲಜನಕ ಸರಬರಾಜಾಗುತ್ತದೆ. ಹೃದಯದ ಒತ್ತಡ ಕಡಿಮೆಯಾಗುತ್ತದೆ. ಶ್ವಾಸಕೋಶಗಳು ಸ್ವಚ್ಛವಾಗುತ್ತವೆ. ರಕ್ತದ ಪ್ರಸರಣ ನಿರಂತರವಾಗಿ ನಡೆಯುತ್ತದೆ. ನಗುವುದರಿಂದ ರಕ್ತದ ನಾಳದೊಳಗೆ ಶೇಖರಣೆಯಾಗಿರುವ ಕೊಬ್ಬು ಕರಗುತ್ತದೆ. ಮೆದುಳಿನ ಭಾಗಕ್ಕೆ ಆಮ್ಲಜನಕ ಹೆಚ್ಚು ಸರಬರಾಜಾಗುತ್ತದೆ. ಚರ್ಮವು ಕಂಗೊಳಿಸುವಂತೆ ಮಾಡುವ ಹಾರ್ಮೋನ್ ಹೆಚ್ಚು ಬಿಡುಗಡೆ ಹೊಂದುತ್ತದೆ. ಆರೋಗ್ಯ ಶಕ್ತಿ ಹೆಚ್ಚುತ್ತದೆ ನಗುವುದರಿಂದ ದೇಹದ ಎಲ್ಲಾ ಭಾಗಗಳಲ್ಲಿ ವಿಶೇಷ ಶಕ್ತಿಯನ್ನು ಬಿಡುಗಡೆ ಮಾಡುವ ಹಾರ್ಮೋನ್‌ಗಳು ಕ್ರೀಯಾಶೀಲವಾಗುತ್ತವೆ. ಆದಕ್ಕಾಗಿಯೇ ನಕ್ಕಮೇಲೆ ನಾವು ಹೆಚ್ಚು ಶಕ್ತಿವಂತರಂತೆ ಕಾಣುತ್ತೇವೆ. ದುಃಖದಲ್ಲಿದ್ದಾಗ ಮೇಲೆ ತಿಳಿಸಿರುವ ಎಲ್ಲಾ ಕ್ರಿಯೆಗಳು ವಿರುದ್ಧವಾಗಿ ನಡೆಯುತ್ತವೆ.

ಕೆಲವರು ಹೇಳುತ್ತಾರೆ ನಾನು ನಗುವುದಿಲ್ಲ ಮತ್ತು ಅಳುವುದಿಲ್ಲ ಸದಾ ಒಂದೇ ರೀತಿ ಇರುತ್ತೇನೆ ಎನ್ನುತ್ತಾರೆ. ಇಂಥವರ ಜೀವನ ಹೇಗಿರುತ್ತದೆಂದರೆ, ಉದ್ಯೋಗ ಮಾಡುವವರಿಗೆ ಭಾನುವಾರವೇ ಇಲ್ಲವೆಂದುಕೊಳ್ಳಿ, ಅಥವಾ ಜೀವನದುದ್ದಕ್ಕೂ ರಜಗಳೇ ಇಲ್ಲವೆಂದುಕೊಳ್ಳಿ ಆಗ ಹೇಗಿರುತ್ತದೆ? ಇದು ಊಹೆ ಮಾಡಿಕೊಳ್ಳಲೂ ಕಷ್ಟವಾಗಿರುತ್ತದೆ, ಅಲ್ಲವೇ. ಹಾಗೆಯೇ ಅಂಥವರ ಜೀವನವಿರುತ್ತದೆ. ಅದೂ ಒಂದು ಜೀವನವೇ ಎನ್ನಬಹುದು! ನಗುವವರ ಸುತ್ತಲೂ, ನಗಿಸುವವರ ಸುತ್ತಲೂ ಸದಾ ಜನರು ಇದ್ದೇ ಇರುತ್ತಾರೆ. ಅಷ್ಟೇ ಏಕೆ ದೂರದರ್ಶನದಲ್ಲಿ ಹಾಸ್ಯ



ಕಾರ್ಯಕ್ರಮವಿತ್ತೆಂದರೆ, ಯಾರೂ ಸಹ ಚಾನಲ್ ಬದಲಿಸುವುದೇ ಇಲ್ಲ. ಒಂದು ವೇಳೆ ಬದಲಿಸಿದರೆ, ಅವರು ಮೇಲೆ ತಿಳಿಸಿದ ಜಾತಿಗೆ ಸೇರಿದವರೆಂದೇ ಅರ್ಥ.

ಸುಪ್ರಸಿದ್ಧ ಪತ್ರಿಕಾ ಬರಹಗಾರರಾದ ನಾರ್ಮನ್ ಕಸಿನ್ಸ್‌ರವರು ತೀವ್ರವಾದ ಖಾಯಿಲೆಗೆ ತುತ್ತಾದಾಗ, ವೈದ್ಯರು ಆರು 6 ತಿಂಗಳಿಗಿಂತ ಹೆಚ್ಚು ಬದುಕಲಾರಿರಿ ಎಂದು ಹೇಳಿಬಿಟ್ಟರು. ಖಾಯಿಲೆಯ ನೋವಿನಿಂದಾಗಿ ಎಂಥದೇ ಔಷಧಿ ಸೇವಿಸಿದರೂ ನಿದ್ದೆ ಬರುತ್ತಿರಲಿಲ್ಲ. ಒಮ್ಮೆ ಆಕಸ್ಮಿಕವಾಗಿ ಹಾಸ್ಯಚಲನ ಚಿತ್ರವೊಂದನ್ನು ವೀಕ್ಷಿಸುತ್ತಾ ಹೊಟ್ಟೆ ಅಲುಗಾಡುವಂತೆ ನಕ್ಕುಬಿಟ್ಟರಂತೆ. ಆ ದಿನ 2ಗಂಟೆಕಾಲ ನಿದ್ದೆ ಬಂತಂತೆ. ಈ ರೀತಿಯಾಗಿ ಹಾಸ್ಯ ಚಲನ ಚಿತ್ರಗಳನ್ನು ನೋಡಲು ಅಭ್ಯಾಸ ಮಾಡಿಕೊಂಡರು. ಅಂತಹ ಚಿತ್ರಗಳನ್ನು ನೋಡಿ ಮನಸಾರೆ ನಕ್ಕರೆ, ಆರಾಮಾಗಿ ನಿದ್ದೆಬರುತ್ತಿತ್ತು. ನಂತರ, ಕಾಮಿಕ್ಸ್ ಪುಸ್ತಕಗಳನ್ನು ಓದುವುದು, ಹಾಸ್ಯ ಚಲನಚಿತ್ರಗಳನ್ನು ನೋಡುವುದು ತಾವು ನಕ್ಕ ಅನುಭವಗಳನ್ನು ಸ್ನೇಹಿತರೊಂದಿಗೆ ಹಂಚಿಕೊಂಡು ಅವರನ್ನು ನಗಿಸುತ್ತ ತಾವು ನಗುವುದರಿಂದ ಅವರಿಗೆ ಆರಾಮಾಗಿ ನಿದ್ದೆ ಬರಲು ಶುರುವಾಯಿತು. ಆಗ 'ಲಾಫ್ಟರ್ ಈಜ್ ದಿ ಬೆಸ್ಟ್ ಮೆಡಿಸಿನ್' ಎಂಬ ಮಾತನ್ನು ಚಾಲ್ತಿಗೆ ತಂದರು. ನಿದ್ದೆ ಮಾಡಲಿಕ್ಕಾಗಿಯೇ ನಗಲು ಪ್ರಾರಂಭಿಸಿದ ಅವರು ಚೆನ್ನಾಗಿ ನಿದ್ದೆ ಮಾಡಲು ಎಲ್ಲರನ್ನು ನಗಿಸಲು ಪ್ರಾರಂಭಿಸಿದರು. ಅಲ್ಲಿರುವ ಹಾಸ್ಪಿಟಲ್ ವಾತಾವರಣವೇ ಬದಲಾಗಿ ಹೋಯಿತು. ಇವರ ಹತ್ತಿರ ನರ್ಸ್‌ಗಳಾಗಲೀ, ವೈದ್ಯರಾಗಲಿ ಹೆಚ್ಚು ಸಮಯ ಕಳೆಯಲು ಇಷ್ಟ ಪಡುತ್ತಿದ್ದರಂತೆ. ಹಾಸ್ಯಪ್ರವೃತ್ತಿಯನ್ನು ಜೀವನದಲ್ಲಿ ಬೆಳೆಸಿಕೊಂಡ ನಂತರ, ವೈದ್ಯರಂಗವನ್ನು ಆಶ್ಚರ್ಯಯಗೊಳಿಸುವ ರೀತಿಯಲ್ಲಿ 20ವರ್ಷಕ್ಕೂ ಮೀರಿ ಅವರು ಬದುಕಿದ್ದರು. ಅವರು ಬದುಕಿದ್ದರೆನ್ನುವುದಕ್ಕಿಂತ ಬದುಕಿದ್ದಷ್ಟು ಕಾಲ ನಗಿಸುತ್ತಾ ಎಲ್ಲರನ್ನು ಬದುಕಿಸುತ್ತಿದ್ದರು.

ಹೌದು ಇಷ್ಟೆಲ್ಲಾ ಹೇಳುತ್ತಿದ್ದೀರಿ ಸರಿ. ನಮಗೂ ನಗಬೇಕೆಂದೇ ಇದೆ. ಆದರೆ, ನಗಲು ಸಾಧ್ಯವಿಲ್ಲದಷ್ಟು ಜೀವನವು ಭಾರವಾಗಿ ಹೋಗಿದೆ. ಏನು ಮಾಡಬೇಕು ಎನ್ನುತ್ತೀರೇನು. ಈ ಸಮಸ್ಯೆ ನಿಮ್ಮದೊಂದೇ ಅಲ್ಲ, ಇದು ಪ್ರತಿಯೊಬ್ಬರ ಸಮಸ್ಯೆ. ಯಾರಿಗೆ ತಾನೇ ಹಾಯಾಗಿ ನಗಬೇಕೆಂದು ಆಸೆ ಇರುವುದಿಲ್ಲ. ಆದರೆ, ಜೀವನ ನಡೆಸುವುದೇ ದುಸ್ತರವಾದಾಗ ನಗಲಿಕ್ಕೆ ಸಮಯವಾದರು ಎಲ್ಲಿದೆ. ಒಂದು ವೇಳೆ ಸಮಯವನ್ನು ತೆಗೆದುಕೊಂಡು ನಗಬೇಕೆಂದರೂ, ನಗುಬರುವುದು ಎಲ್ಲಿಂದ? ಜೀವನದ ಕುರಿತೇ ಆಲೋಚನೆಗಳು ಪ್ರಾರಂಭವಾಗುತ್ತವೇ ವಿನಃ ನಗುವಿನ ಕಡೆಗೆ ಗಮನ ಹರಿಯುವುದೇ ಇಲ್ಲ ಅಲ್ಲವೇ? ಹಾಗಂತ ನಗದೇ ಇದ್ದು ಬಿಡುತ್ತೀರಾ ಅಥವಾ ನಗಲು ತೀರ್ಮಾನಿಸುತ್ತೀರಾ?

ಹೌದು ನೀವು ನಗಬೇಕೆಂದು ತೀರ್ಮಾನಿಸಿದರೆ ಸಾಕು ನಗಲಿಕ್ಕೆ ಪ್ರಾರಂಭಿಸುತ್ತೀರಿ. ಈ ತೀರ್ಮಾನ ನಿಮ್ಮಲ್ಲಿ ಬಹಳಾ ಬದಲಾವಣೆಯನ್ನು ತರುತ್ತದೆ. ನಿಮ್ಮಿಂದ ಗಂಭೀರತ್ವವು ದೂರಸರಿಯುತ್ತದೆ, ಸಹಜತ್ವವು ಹೊರಬೀಳುತ್ತದೆ. ಆದರೆ, ನೀವು ತೆಗೆದುಕೊಂಡ ತೀರ್ಮಾನ ತುಂಬಾ ಗಟ್ಟಿಯಾಗಿರಬೇಕು. A Person without a smile is not fully dressed ಎನ್ನುತ್ತಾರೆ ಮಹಾತ್ಮ ಗಾಂಧೀಜಿಯವರು. ನೀವು ಎಂಥದೇ ಉಡುಗೆ ತೊಡಿಗೆಗಳನ್ನು ತೊಟ್ಟರೂ, ತುಂಬಾ ಬೆಲೆ ಬಾಳುವ ಕಾರಿನಲ್ಲಿ ತಿರುಗಿದರೂ ನಗುವಿಲ್ಲದ ಮುಖದಲ್ಲಿ ಅತೃಪ್ತಿಯೇ ತುಂಬಿರುತ್ತದೆ.



ದಿನದಲ್ಲಿ ಅರ್ಧಗಂಟೆಗೆಯ ಸಮಯ ನಗಲು ಮೀಸಲಿಡುವುದೂ ಸಹ ಧ್ಯಾನಕ್ಕೆ ಸಮಯ ಮೀಸಲಿಟಂತೆಯೇ ಸರಿ. ಹಾಗಂತ ಅರ್ಧಗಂಟೆ ಮಾತ್ರ ನಗುತ್ತ, ಇನ್ನುಳಿದ ಇಪ್ಪತ್ತೂರುವರೆ ಗಂಟೆ ಗಂಭೀರವಾಗಿರಬೇಕಿಲ್ಲ. ಉಳಿದ ಎಲ್ಲಾ ಸಮಯದಲ್ಲೂ ಸಹ ಹಾಸ್ಯ ಚಟಾಕಿಯನ್ನು ಹಾರಿಸುತ್ತಲೇ ಇರಬೇಕು ಮತ್ತು ನೀವು ಹಾಸ್ಯಕ್ಕೆಂದು ಮೀಸಲಿಟ್ಟ ಅರ್ಧಗಂಟೆ ಸಮಯದಲ್ಲಿ ಎಲ್ಲವನ್ನು ಮರೆತು ವಿಶೇಷವಾಗಿ ನಗಬೇಕು. ನಕ್ಕಾಗ ಕಣ್ಣಲ್ಲಿ ನೀರು ಬರುವಂತೆ ನಗಬೇಕು.

ಹಾಗೆ ನಗಬೇಕೆಂದರೆ, ಜೀವನದ ಕುರಿತು ಅವಗಾಹನೆ ಬರಬೇಕು ನಾನು ಯಾರು? ಈ ಜೀವನ ಏನು? ನನಗೂ ಈ ಸೃಷ್ಟಿಗೂ ಸಂಬಂಧವೇನು? ಎಂಬ ಪ್ರಶ್ನೆಗಳು ನಿಮ್ಮಲ್ಲಿ ಉದ್ಭವವಾದಾಗ ಆ ಪ್ರಶ್ನೆಗಳಿಗೆ ತಕ್ಕ ಉತ್ತರ ನೀಡಲು ನಿಮಗೊಬ್ಬ ಗುರುವು ಸಿದ್ಧನಾಗಿರುತ್ತಾನೆ. ಶಿಷ್ಯನು ಶಿಷ್ಯತ್ವವನ್ನು ಸ್ವೀಕರಿಸಲು ಸಂಪೂರ್ಣವಾಗಿ ಸಿದ್ಧನಾದಾಗ ಗುರುವು ಪ್ರತ್ಯಕ್ಷನಾಗುತ್ತಾನೆ ಎಂದು ಉಪನಿಷತ್ತುಗಳು ಹೇಳುತ್ತವೆ.

ನಿಮ್ಮ ಜೀವನದ ಕುರಿತು ತಿಳಿದುಕೊಳ್ಳಲು ಸಂಪೂರ್ಣವಾಗಿ ಸಿದ್ಧರಾದಾಗ ತಿಳಿಸಿ ಹೇಳಲು ಗುರುವು ನಿಮ್ಮ ಹತ್ತಿರವೇ ಇರುತ್ತಾನೆ. ಆದರೆ, ಇಷ್ಟುದಿನ ತಿಳಿದು ಕೊಳ್ಳಬೇಕೆಂದುಕೊಳ್ಳಲಿಲ್ಲ. ಹಾಗಾಗಿ, ಗುರು ಪಕ್ಕದಲ್ಲಿದ್ದರೂ ದರ್ಶನವಾಗಲಿಲ್ಲ. ಇಂದೇ ನೀವು ತೀರ್ಮಾನಿಸಿದರೆ, ಗುರುವಿನ ದರ್ಶನ ವಾಗುತ್ತದೆ. ಗುರುವೆಂದರೆ ಮಠತ್ತೋರ್ವ ವ್ಯಕ್ತಿಯೆಂದು ಭಾವಿಸಬಾರದು. ಅದು ವ್ಯಕ್ತಿಯಾಗಿರಬಹುದು ಪುಸ್ತಕವಾಗಿರಬಹುದು. ನಿಮ್ಮ ಮನೆಯಲ್ಲಿಯೇ ನಿಮ್ಮ ಮಕ್ಕಳಾಗಿರಬಹುದು. ನಿಮ್ಮ ಹೆಂಡತಿ ಅಥವಾ ಗಂಡನಾಗಿರಬಹುದು. ಸ್ನೇಹಿತನಾಗಿರಬಹುದು, ಶತ್ರುವಾಗಿರಬಹುದು ಅಥವಾ ನಿಮ್ಮ ಅಂತರ್ವಾಣಿಯಾಗಿರಬಹುದು ಸುಪ್ತಪ್ರಜ್ಞೆಯಾಗಿರಬಹುದು, ಯಾವುದೇ ಮೂಲವಾಗಿರಬಹುದು. ನೀವು ತಿಳಿದುಕೊಳ್ಳಲು ಸಂಪೂರ್ಣವಾಗಿ ಸಿದ್ಧರಾದಾಗ, ಯಾವುದೋ ಮೂಲದಿಂದ ನಿಮಗೆ ಮಾಹಿತಿಯನ್ನು ರವಾನಿಸುವುದೇ ಪ್ರಕೃತಿಯ ಕೆಲಸ.

ಜೀವನದ ಕುರಿತು ಅವಗಾಹನೆ ಏರ್ಪಟ್ಟರೆ ಜೀವನ ಸರಳವಾಗುತ್ತದೆ. ಪ್ರತಿಯೊಬ್ಬರೂ ಈ ಭೂಮಿಗೆ ಬಂದಿರುವುದು

ಹ್ಯಾಯಾಗಿ ಜೀವಿಸಲಿಕ್ಕೆ ಮತ್ತು ಅನುಭವಗಳನ್ನು ಹೊಂದಲಿಕ್ಕೆ. ಆದರೆ, ನಾವು ಅದನ್ನೆಲ್ಲ ಮರೆತು ಜೀವವನ್ನೇ ಭಾರವೆಂಬಂತೆ ಜೀವಿಸುತ್ತಿದ್ದೇವೆ. ಹುಟ್ಟಿರುವುದು ಯಾತಕ್ಕೋ ಬದುಕಿರುವುದು ಯಾತಕ್ಕೋ, ನಾವು ಯಾತಕ್ಕೋ ತಿಳಿಯದೇ ಹೋಗಿದೆ. ಜೀವನ ಬರ್ಬರವಾಗುತ್ತಿದೆ. ಇದರಿಂದ ನಗು ದೂರವಾಗುತ್ತಿದೆ. ಆಧ್ಯಾತ್ಮಿಕ ಜೀವನವನ್ನು ಅಳವಡಿಸಿಕೊಂಡರೆ ಜೀವನದ ಕುರಿತು ತಿಳಿದುಕೊಳ್ಳುತ್ತೇವೆ, ಆಗ ಇಷ್ಟೇನಾ ಜೀವನವೆಂದರೆ ಎಂಬುದು ತಿಳಿಯುತ್ತದೆ. ಆಗ ನಗುವು ನಮ್ಮಲ್ಲಿ ಪ್ರವೇಶಿಸುತ್ತದೆ.

ಪ್ರಕೃತಿ ಸದಾ ನಮ್ಮನ್ನು ಪರಿಶೀಲಿಸುತ್ತಿರುತ್ತದೆ. ನಮ್ಮ ತೀರ್ಮಾನಕ್ಕೆ ತಕ್ಕಹಾಗೆ ಸ್ಪಂದಿಸುತ್ತಲೇ ಇರುತ್ತದೆ. ಯಾವಾಗ ನಮ್ಮ ತೀರ್ಮಾನ ಸಂಪೂರ್ಣವಾಗಿ ಬಲವಾದಾಗ ಅದಕ್ಕೆ ತಕ್ಕಹಾಗೆ ಕಾರ್ಯರೂಪಗೊಳಿಸುತ್ತದೆ. ನಗುವೆಂಬುದು ಸಹಜವಾದದ್ದು. ನಾನು ಸದಾ ನಗುತ್ತಿರಬೇಕು ಹಾಗೂ ನಗಿಸುತ್ತಿರಬೇಕು ಎಂಬ ತೀರ್ಮಾನ ಬಲವಾಗಿ ಏರ್ಪಟ್ಟಾಗಲೇ ಅದಕ್ಕೆ ತಕ್ಕ ರೀತಿಯಲ್ಲಿ ಕಾರ್ಯ ಪ್ರಾರಂಭವಾಗುತ್ತದೆ. ನಾನು ತೀರ್ಮಾನ ತೆಗೆದುಕೊಂಡಿದ್ದೇನೆ. ಆದರೆ, ನಗಲು ಆಗುತ್ತಿಲ್ಲವಲ್ಲ ಎಂದು ಎದುರು ನೋಡಬಾರದು. ನಿಮಗೆ ಸಿಕ್ಕ ಚಿಕ್ಕ ಚಿಕ್ಕ ಅವಕಾಶಗಳನ್ನು ಉಪಯೋಗಿಸಿಕೊಂಡು ನಗಲು ಪ್ರಾರಂಭಿಸಬೇಕು ಟಿವಿಯಲ್ಲಿ ಪ್ರೋಗ್ರಾಂಗಳನ್ನು ನೋಡುವುದಾಗಲೀ, ಹಾಸ್ಯ ಚಟಾಕಿಯ ಪುಸ್ತಕಗಳನ್ನು ಓದುವುದಾಗಲೀ, ಹಾಸ್ಯ ಚಲನಚಿತ್ರಗಳನ್ನು ನೋಡುವುದಾಗಲಿ, ಜೋಕ್ಸ್ ಹೇಳುವ ಸ್ನೇಹಿತರನ್ನು ಸೇರಿಕೊಳ್ಳುವುದಾಗಲಿ ಅಥವಾ ನೀವೇ ಚಿಕ್ಕ ಪುಟ್ಟ ಜೋಕ್ಸ್‌ಗಳನ್ನು ಹೇಳುವುದಾಗಲೀ ಮಾಡಲು ಪ್ರಾರಂಭಿಸಬೇಕು.

ಅತಿ ಚಿಕ್ಕದಾದ ಈ ಜೀವನದಲ್ಲಿ ಚೊಕ್ಕವಾಗಿರಬೇಕೆಂದರೆ, ನಗುವು ಬೇಕೇಬೇಕು. ಬದುಕಿ ಉಳಿಯುವುದಕ್ಕಾಗಿಯೇ ಜೀವಿಸುತ್ತಿದ್ದೇವೆಂದರೆ, ಅದಕ್ಕೆ ಅರ್ಥವೇ ಇಲ್ಲ. ಯಾಕೆ ಜೀವಿಸಬೇಕು ಎಂಬ ಪ್ರಶ್ನೆ ನಮ್ಮಲ್ಲಿ ಉದ್ಭವವಾಗಲೇಬೇಕು. ಆರ್ಥಿಕವಾಗಿ ಆರೋಗ್ಯವಾಗಿ ಗೌರವಯುತವಾಗಿ ಜೀವಿಸುವುದೇ ಜೀವನವಲ್ಲ, ಇದರ ಆಚೆ ಒಂದು ಅಮೂಲ್ಯವಾದ ಜೀವನವಿದೆ. ಅದರ ಕುರಿತು ತಿಳಿದುಕೊಂಡರೆ, ಈಗ ಜೀವಿಸುತ್ತಿರುವ ಜೀವನ ಸರಳವಾಗುತ್ತದೆ. ಆರ್ಭಟವು ನಿಲ್ಲುತ್ತದೆ ಹಾರಾಟಗಳು ನಿಲ್ಲುತ್ತವೆ. ಕೃತ್ರಿಮವಾಗಿ ಜೀವಿಸುವುದನ್ನು ಬಿಟ್ಟುಬಿಡುತ್ತೇವೆ ಸಹಜವಾಗಿ ಜೀವಿಸಲು ಪ್ರಾರಂಭಿಸುತ್ತೇವೆ. ಆಡಂಬರಗಳಿಗೆ ಹೋಗುವುದಿಲ್ಲ, ಎಲ್ಲರನ್ನೂ ಸಮಾನವಾಗಿ ನೋಡುತ್ತೇವೆ. ಚಿಕ್ಕಮಕ್ಕಳ ಹತ್ತಿರ ಚಿಕ್ಕವರಾಗಿ ಆಟವಾಡುತ್ತೇವೆ, ಇದ್ದದ್ದನ್ನು ಇದ್ದಂತೆ ನೋಡುತ್ತೇವೆ. ಹೋಲಿಕೆ ಮಾಡಿಕೊಳ್ಳುವುದಿಲ್ಲ, ಇದನ್ನೇ ಸಹಜ ಜೀವನವೆನ್ನುತ್ತಾರೆ.

ಸಹಜ ಸ್ಥಿತಿಯಲ್ಲಿರಬೇಕೆಂದರೆ, ಬುದ್ಧಿ ಸರಿಯಾದ ರೀತಿಯಲ್ಲಿರಬೇಕು. ಬುದ್ಧಿ ಸರಿಯಾದ ರೀತಿಯಲ್ಲಿರಬೇಕೆಂದರೆ, ಆಧ್ಯಾತ್ಮಿಕ ಜ್ಞಾನ ಅವಶ್ಯಕ ಇದನ್ನೇ 'ಸ್ಪಿರಿಚುವಲ್ ಸೈನ್ಸ್' ಎನ್ನುತ್ತಾರೆ. ಇದರ ಕುರಿತು ತಿಳಿದುಕೊಂಡರೆ ಜೀವನ ಹಗುರವಾಗುತ್ತದೆ. ಜೀವನದಲ್ಲಿ ಬರುವ ಪ್ರತಿ ಸಮಸ್ಯೆಗಳು ಒಂದೊಂದು ಪಾಠವೆಂಬ ಅವಗಾಹನೆ ಬರುತ್ತದೆ. ಬಂದಂತಹ ಸಮಸ್ಯೆಗಳನ್ನು ಸವಾಲುಗಳಾಗಿ ಸ್ವೀಕರಿಸುತ್ತೇವೆ. ಸವಾಲುಗಳನ್ನು ಸರಿಯಾದ ರೀತಿಯಲ್ಲಿ ಎದುರಿಸಿ ನಿಲ್ಲುತ್ತೇವೆ. ಆ ರೀತಿಯಾಗಿ ಒಂದು ಬಾರಿ ಸಮಸ್ಯೆಯನ್ನು ಸವಾಲೆಂದು ಸ್ವೀಕರಿಸಿ ಜಯಿಸಲು ಪ್ರಾರಂಭಿಸಿದಾಗ, ಎಂಥದೇ ಸಮಸ್ಯೆಗಳು ಬಂದರೂ ನಮ್ಮೆದುರು ತಲೆ ತಗ್ಗಿಸಿ ನಿಲ್ಲಲೇಬೇಕು. ಆಗ ಜೀವನ ಒಂದು ಆಟವಾಗುತ್ತದೆ. ನಗುವುದೇ ಭೋಗವಾಗುತ್ತದೆ. ನಗುನಗುತ್ತಾ ಜೀವಿಸುವುದೇ ಅತ್ಯಂತ ಸುಲಭವೆಂದು ತಿಳಿಯುತ್ತದೆ. ನಗುತ್ತಾ ನಗಿಸುತ್ತಲೇ ಜೀವಿಸುವುದೇ ಸರಿಯಾದ ಮಾರ್ಗವೆಂಬುದನ್ನು ತಿಳಿದುಕೊಳ್ಳುತ್ತೇವೆ.

ನೀವು ನಗುತ್ತಾ ಎಲ್ಲರನ್ನು ನಗಿಸಲು ಪ್ರಾರಂಭಿಸಿ ನಿಮಗೆ ಶತ್ರುಗಳೇ ಇರುವುದಿಲ್ಲ, ಇದ್ದರೂ ಮಿತ್ರರಾಗುತ್ತಾರೆ. ಇನ್ನು ಯಾಕೆ ಆಲೋಚನೆ? ಈ ದಿನದಿಂದಲೇ ಈ ಕ್ಷಣದಿಂದಲೇ ನಗುನಗುತ್ತಲೇ ಇರುತ್ತೇನೆಂಬ ಒಂದು ತೀರ್ಮಾನ ತೆಗೆದುಕೊಳ್ಳುತ್ತೀರಿ ತಾನೆ?

ನಗಬೇಕಣ್ಣ ನಗಬೇಕು,

ಎಲ್ಲರ ನಗಿಸುತಲಿರ ಬೇಕು,

ಹುಟ್ಟಿರುವುದೇ ನಗಲಿಕ್ಕಾಗಿ,

ನಕ್ಕು ನಕ್ಕು ನಲಿಯುವುದಕ್ಕಾಗಿ

ನಗುತಾ ನಗಿಸುತಾ ಸಾಯುವುದಕ್ಕಾಗಿ

ಹಾಗಾದರೆ ನಗೋಣವೇ?

— ಶ್ರೀ ಕೆ. ಭೀಮೇಶ್ ರೆಡ್ಡಿ, ಅಧ್ಯಕ್ಷರು
**ಕರ್ನಾಟಕ ಪಿರಮಿಡ್ ಧ್ಯಾನ ಪ್ರಚಾರ ಟ್ರಸ್ಟ್, ಬೆಂಗಳೂರು**

# ಪತ್ರೀಜಿಯವರ ಕರ್ನಾಟಕ ಪರ್ಯಟನೆ

ಪತ್ರೀಜಿಯವರು, ಚಿಕ್ಕಬಳ್ಳಾಪುರದ ಕಾರ್ಯಕ್ರಮದಲ್ಲಿ ಭಾಗವಹಿಸಲು ಬೆಂಗಳೂರಿನಿಂದ 4 ಗಂಟೆಗೆ ಹೊರಟು 5:30ಕ್ಕೆ ಚಿಕ್ಕಬಳ್ಳಾಪುರದ ಹೊರವಲಯದಲ್ಲಿರುವ ಆದಿಚುಂಚನಗಿರಿ ಮಠದ ಪ್ರಾದೇಶಿಕ ಕಛೇರಿಯನ್ನು ತಲುಪಿದರು. ಅಲ್ಲಿನ ಮಠದ ಉಸ್ತುವಾರಿ ವಹಿಸಿರುವ ಶ್ರೀ ನಿರ್ಮಲಾನಂದ ಸ್ವಾಮಿಯವರು ಪತ್ರೀಜಿಯವರನ್ನು ಬರಮಾಡಿಕೊಂಡರು.

ಆದಿಚುಂಚನಗಿರಿ ಮಠದ ಶಾಲೆಯಲ್ಲಿ ಧ್ಯಾನ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಅಲ್ಲಿನ 300ಕ್ಕೂ ಹೆಚ್ಚಿನ ವಿದ್ಯಾರ್ಥಿನಿಯರ ಜೊತೆಗೆ ಚಿಕ್ಕಬಳ್ಳಾಪುರ, ಗೌರೀಬಿದನೂರು ಇತ್ಯಾದಿ ಸ್ಥಳಗಳಿಂದ ಬಂದಿದ್ದ ನೂರಾರು ಪಿರಮಿಡ್ ಮಾಸ್ಟರ್‌ಗಳು, ಸಾರ್ವಜನಿಕರು ಪತ್ರೀಜಿಯವರ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ಮಠಾಧೀಶರಾದ ಶ್ರೀಶ್ರೀಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರಿಗೆ ವಂದನೆ ಸಲ್ಲಿಸಿದ ನಂತರ, ವಿದ್ಯಾರ್ಥಿನಿಯರ ಗುಂಪಿನಿಂದ ಸ್ವಾಗತ ಗೀತೆಯೊಂದಿಗೆ ಕಾರ್ಯಕ್ರಮ ಆರಂಭವಾಯಿತು.

ಪ್ರೊ. ಶಿವರಾಮರೆಡ್ಡಿಯವರು ಸ್ವಾಗತ ಭಾಷಣದಲ್ಲಿ ಪತ್ರೀಜಿ ಹಾಗೂ ಪಿರಮಿಡ್ ಸೊಸೈಟಿ ಬೆಳೆದು ಬಂದ ಬಗ್ಗೆ ವಿವರವಾಗಿ ತಿಳಿಸಿದರು. ಪಿರಮಿಡ್‌ಗಳ ಬಗ್ಗೆಯೂ ಕಿರುಪರಿಚಯ ಮಾಡಿಕೊಟ್ಟರು. ಶ್ರೀ ನಿರ್ಮಲಾನಂದ ಸ್ವಾಮೀಜಿಯವರು ಪತ್ರೀಜಿಯವರಿಗೆ ಶಾಲು ಹೊದಿಸಿ, ಹಾರ, ಹಣ್ಣು , ಅರ್ಪಿಸಿ ಗೌರವಿಸಿದರು.

ಸ್ಥಳೀಯ ಮಠದ ಉಸ್ತುವಾರಿ ವಹಿಸಿದ ಶ್ರೀ ನಿರ್ಮಲಾನಂದ ಸ್ವಾಮೀಜಿಯವರು ನಂತರ ಮುಕ್ತಕಂಠದಿಂದ ಪತ್ರೀಜಿಯವರ ಸಾಧನೆಯನ್ನು ಕೊಂಡಾಡಿದರು.'ಹರಿಯುವ ನೀರನ್ನು ಉಪಯೋಗಿಸದಿದ್ದರೆ, ಅದು ಹೇಗೆ ವ್ಯರ್ಥವಾಗುತ್ತದೆಯೋ ಹಾಗೆ, ನಮ್ಮ ಜೀವನದ ಬಹುಪಾಲು ವ್ಯರ್ಥವಾಗುತ್ತಾ ಇದೆ. ನಾವೆಲ್ಲ ಕೇವಲ ಭೌತಿಕವಾಗಿ ಮನುಷ್ಯ ರೂಪದಲ್ಲಿದ್ದೇವೆ; ಆದರೆ, ನಮ್ಮ ಶಕ್ತಿ-ಸಾಮರ್ಥ್ಯ ಅಪಾರವಾದದ್ದು ಒಳ್ಳೆಯ ಮತ್ತು ಸರಿಯಾದ ವಿಧಾನಗಳಿಂದ ಇದನ್ನು ಪೂರ್ಣವಾಗಿ ಅರಿಯಬೇಕು.

- ನಮ್ಮನ್ನು ನಾವು ಅರ್ಥ ಮಾಡಿಕೊಳ್ಳದಿದ್ದರೆ, ಈ ಜೀವನ ಇನ್ನು ಏಕೆ? ಎಂದು ಪ್ರಶ್ನಿಸಿದರು.
- ಜನರಿಂದ ಅಥವಾ ವೈದ್ಯರಿಂದ ಪರಿಹಾರ ಕಾಣದ ಸಮಸ್ಯೆಗಳಿಗೆ ಪರಿಹಾರದ ಮಾರ್ಗ ತೋರಲು ಭೂಮಿಗೆ ಜ್ಞಾನೋದಯವಾದ ಮಾಸ್ಟರ್‌ಗಳು ಬರುತ್ತಾರೆ.
- ಭೌತಿಕ ಶರೀರದ ಪ್ರತಿ ರೋಗಕ್ಕೂ ಔಷಧಿಯಿಂದ ಪರಿಹಾರ ಸಾಧ್ಯವಿಲ್ಲ, ಆದ್ದರಿಂದ, ಶರೀರದ ಖಾಯಿಲೆಗೆ ಹಾಗೂ ಜೀವನದ ತೊಂದರೆಗಳಿಗೆ ಏಕೈಕ ಪರಿಹಾರ ಎಂದರೆ ಧ್ಯಾನ ಎಂದು ಧ್ಯಾನದ ಬಗ್ಗೆ ಹೊಗಳಿದರು.
- "ಬುದ್ಧತ್ವ ಪಡೆದ ಉನ್ನತ ಸ್ಥಿತಿಯಲ್ಲಿರುವ ಜ್ಞಾನಿಗಳು ಧ್ಯಾನ ಕಲಿಸಲು ಜನಸಾಮಾನ್ಯರ ಬಳಿಗೆ ಬರುವುದು ಅಮೋಘ" ಎಂದು ಹೇಳಿದರು.
- ಜ್ಞಾನೋದಯವಾದ ಮಾಸ್ಟರ್‌ಗಳು ಜನರಿಗೆ ಜ್ಞಾನ ಬೋಧನೆ ಮಾಡಲು ಭೂಮಿಗೆ ಮತ್ತೆ ಹಿಂದಿರುಗಿ ಬರುತ್ತಾರೆ ಎಂದು ಹೇಳಿ ಶ್ರೀ ನಿರ್ಮಲಾನಂದ ಸ್ವಾಮಿಯವರು ತಮ್ಮ ಮಾತುಗಳನ್ನು ಮುಗಿಸಿದರು.

ನಂತರ, ಪ್ರೊ. ಶಿವರಾಮರೆಡ್ಡಿಯವರು ಬ್ರಹ್ಮರ್ಷಿ ಪತ್ರೀಜಿಯವರನ್ನು ಧ್ಯಾನ ತರಗತಿ ನಡೆಸಲು ಆಹ್ವಾನಿಸಿದರು.

ಬ್ರಹ್ಮರ್ಷಿ ಪತ್ರೀಜಿಯವರು ಮಠದ ಇಬ್ಬರು ಸ್ವಾಮೀಜಿಯವರಿಗೆ ನಮಸ್ಕರಿಸಿ ತಮ್ಮ ತರಗತಿ ಪ್ರಾರಂಭಿಸಿದರು.

'ನಾನು ಇಲ್ಲಿರುವುದಕ್ಕೆ ಸಂತೋಷವಾಗಿದೆ. ಇದಕ್ಕೆ ಕಾರಣರಾದವರು ಶ್ರೀ ನಿರ್ಮಲಾನಂದ ಸ್ವಾಮೀಜಿ. ಇಂತಹ ಶ್ರೇಷ್ಠ ಆತ್ಮಗಳನ್ನು ಕಾಣಲು ನನಗೆ ತುಂಬಾ ಸಂತೋಷವಾಗಿದೆ ಮತ್ತು ಅವರಿಂದ ಆಕರ್ಷಿತನಾಗಿದ್ದೇನೆ' ಎಂದು ಸ್ವಾಮೀಜಿಯವರನ್ನು ಕೊಂಡಾಡಿದರು.

- 'ಪ್ರತಿಯೊಬ್ಬರು ಧ್ಯಾನ ಮಾಡಬೇಕು'
- ಸಂಗೀತ ಕಲಿಯಲು ಉತ್ತಮ ವಯಸ್ಸು ಯಾವುದು, ಹಾಗೂ ಸಂಸ್ಕೃತ ಭಾಷೆ ಕಲಿಯಲು ಉತ್ತಮ ವಯಸ್ಸು ಯಾವುದು ಎಂದು ಪ್ರಶ್ನಿಸಿದರು. ಅದೇ ರೀತಿ ಧ್ಯಾನ ಕಲಿಯಲು ಸರಿಯಾದ ವಯಸ್ಸು ಯಾವುದು? 60 ವರ್ಷವಾದ ನಂತರವೇ? ಎಂದು ಕೇಳಿ, ಜೀವನದಲ್ಲಿ ಅತಿ ಬೇಗ ಧ್ಯಾನ ಕಲಿಯಬೇಕು ಎಂದರು.
- ಸಂಗೀತ, ಈಜು - ಈ ಕಲೆಗಳಂತೆ, ಧ್ಯಾನ ಕೂಡ ಕಲಿತು ಆಚರಿಸುವಂತಹ ವಿದ್ಯೆ ಎಂದರು. ಸಭೆಯಲ್ಲಿರುವವರಿಗೆ ಸಂಗೀತ ಪಾಠ ಮಾಡಿ 'ಸ..ರಿ..ಗ..ಮ...' ಸಪ್ತ ಸ್ವರಗಳನ್ನು ಹಾಡಿಸಿದರು. ಇಂದಿನಿಂದ ಇಲ್ಲಿ ಇರುವ ಎಲ್ಲಾ ವಿದ್ಯಾರ್ಥಿನಿಯರು ಸಂಗೀತ ಕಲಿತು ಅಭ್ಯಾಸ ಮಾಡಬೇಕು ಎಂದು ಹೇಳಿದರು.
- ಯಾವುದೇ ಕಲೆಯನ್ನಾಗಲಿ ಮೊದಲು ಕಲಿತು ನಂತರ, ನಿರಂತರವಾಗಿ ಅಭ್ಯಾಸ ಮಾಡಬೇಕು ಎಂದರು. ಶಾಸ್ತ್ರೀಯ ಸಂಗೀತವಾಗಲಿ, ಕೊಳಲಿನ ಸಂಗೀತವಾಗಲಿ ಮೊದಲು ಕಲಿತು ನಂತರ, ನಿತ್ಯ ಸಾಧನೆಯಲ್ಲಿ ತೊಡಗಬೇಕು ಎಂದರು.
- ಸಂಗೀತದ ಸಾಧನೆಯಲ್ಲಿ ಎಂ.ಎಸ್.ಸುಬ್ಬುಲಕ್ಷ್ಮಿಯಾಗಲಿ, ಕೊಳಲಿನ ಸಾಧನೆಯಲ್ಲಿ ಪತ್ರೀಜಿಯವರಾಗಲಿ ಉನ್ನತ ಮಟ್ಟ ತಲುಪಲು ಕಾರಣ ನಿರಂತರ ಅಭ್ಯಾಸ ಎಂದು ಹೇಳಿ, ನಿತ್ಯ ಸಾಧನೆಯ ಮಹತ್ವವನ್ನು ತಿಳಿಸಿದರು.
- ಎಲ್ಲರಿಗೂ ದಿನದಲ್ಲಿ 24 ಗಂಟೆಗಳ ಸಮಯವಿದೆ, ಇದನ್ನು

ಸರಿಯಾಗಿ ಉಪಯೋಗಿಸಿಕೊಳ್ಳಬೇಕು ಎಂದರು.

- ಒಂದು ದಿನ ಏನೂ ತಿನ್ನದಿದ್ದರೆ ಉಪವಾಸ;
  ಒಂದು ದಿನ ಏನೂ ಮಾತನಾಡದಿದ್ದರೆ ಮೌನ;
  ಅದೇರೀತಿ ಒಂದು ದಿನ ಏನೂ ಯೋಚನೆ ಮಾಡದಿದ್ದರೆ ಅದೇ ಧ್ಯಾನ ಎಂದು ಹೇಳಿದರು. ಮನಸ್ಸನ್ನು ಯೋಚನಾ ರಹಿತವಾಗಿಸಲು ಇರುವ ತಂತ್ರಜ್ಞಾನ ಎಂದರೆ ಶ್ವಾಸವನ್ನು ಗಮನಿಸುವುದು ಎಂದರು.
- ಬ್ರಹ್ಮರ್ಷಿ ಪತ್ರೀಜಿಯವರು 20 ನಿಮಿಷಗಳ ಕಾಲ ಕೊಳಲಿನ ನಾದದೊಂದಿಗೆ ಧ್ಯಾನ ಮಾಡಿಸಿದರು. ಧ್ಯಾನದ ನಂತರ, ಧ್ಯಾನದ ಸಮಯದಲ್ಲಿ ಆಗುವ 7ರೀತಿಯ ವಿವಿಧ ಅನುಭವಗಳನ್ನು ವಿವರಿಸಿ, ಪ್ರತಿಯೊಂದು ಅನುಭವ ಆಗಿರುವವರನ್ನು ಕೈ ಎತ್ತಲು ಹೇಳಿದರು.
- ಪ್ರತಿಯೊಬ್ಬರಿಗೂ ಜ್ಞಾನಚಕ್ಷು (ಮೂರನೇ ಕಣ್ಣು) ಇರುತ್ತದೆ. ನಾವು ಅದನ್ನು ಧ್ಯಾನದ ಮೂಲಕ ಸಕ್ರಿಯಗೊಳಿಸಬೇಕು ಎಂದು ಹೇಳಿದರು.
- ಪ್ರತಿ ನಿತ್ಯ ತಮ್ಮ ವಯಸ್ಸಿನಷ್ಟು ನಿಮಿಷಗಳ ಕಾಲ ಧ್ಯಾನ ಮಾಡಬೇಕೆಂದರು. ಕನಿಷ್ಠ ಒಮ್ಮೆ ಮಾಡಬೇಕು. ಎರಡು ಬಾರಿ ಮಾಡಿದರೆ, ಇನ್ನೂ ಉತ್ತಮ ಎಂದು ಹೇಳಿದರು. ನಿಮ್ಮ ಧ್ಯಾನದ ಅನುಭವಗಳನ್ನು ಬರೆದಿಡಬೇಕೆಂದು ಹೇಳಿದರು.
- ಧ್ಯಾನದ ಲಾಭಗಳ ಬಗ್ಗೆ ಹೇಳುತ್ತಾ ಆರೋಗ್ಯ ಸಹಜವಾಗಿ ಲಭಿಸುತ್ತದೆ ಎಂದರು.
- ಧ್ಯಾನದ ಮೂಲಕ ಜ್ಞಾಪಕ ಶಕ್ತಿ ಉತ್ತಮಗೊಳ್ಳುತ್ತದೆ; ಅರ್ಥ ಗ್ರಹಿಸುವಿಕೆ ಉತ್ತಮಗೊಳ್ಳುತ್ತದೆ, ಏಕಾಗ್ರತೆ ಹೆಚ್ಚುತ್ತದೆ ಎಂದರು ಧ್ಯಾನದಿಂದ ಆತ್ಮಸ್ಥೈರ್ಯ, ಹೆಚ್ಚುತ್ತದೆ ಎಲ್ಲದಕ್ಕಿಂತ ಹೆಚ್ಚಾಗಿ ಜ್ಞಾನದಕಣ್ಣು (ದಿವ್ಯಚಕ್ಷು) ಸಕ್ರಿಯಗೊಳ್ಳುತ್ತದೆ ಎಂದು ಹೇಳಿದರು. ಗೌತಮ ಬುದ್ಧ ಧ್ಯಾನ ಮಾಡಿದ್ದು ಈ ಜ್ಞಾನದ ಕಣ್ಣನ್ನು ಸಕ್ರಿಯಗೊಳಿಸಿಕೊಳ್ಳಲು ಎಂದರು.
- ಬುದ್ಧ , ಬಸವೇಶ್ವರರು ದಿವ್ಯಚಕ್ಷು ಸಕ್ರಿಯಗೊಳಿಸಿಕೊಂಡ ಮಹಾನುಭಾವರು ಎಂದರು. ಶ್ವಾಸದ ಜೊತೆಯಲ್ಲಿರಿ, ಅಪಾರವಾದ ವಿಶ್ವ ಪ್ರಾಣಶಕ್ತಿ ಪಡೆಯುವಿರಿ. ವಿದ್ಯಾರ್ಥಿಗಳಿಗೆ ಬಹಳ ಉಪಯೋಗ ಆಗುವುದು. ಪರೀಕ್ಷೆಯಲ್ಲಿ ಉತ್ತಮ ಸಾಧನೆಗೂ ಸಹಕಾರಿಯಾಗುವುದು ಎಂದು ಹೇಳಿದರು.

ಕಡೆಯಲ್ಲಿ ಮತ್ತೊಮ್ಮೆ ಧ್ಯಾನ ಮಾಡಿಸಿ, ಕಾರ್ಯಕ್ರಮ ಏರ್ಪಡಿಸಿದ್ದಕ್ಕಾಗಿ ಸ್ವಾಮಿಜಿಯವರನ್ನು ವಂದಿಸಿದರು.

ಎಲ್ಲಾ ಮಕ್ಕಳಿಗೂ, ಪಿರಮಿಡ್ ವ್ಯಾಲಿಗೆ ಆಹ್ವಾನಿಸಿ ಪತ್ರೀಜಿಯವರು ಕಾರ್ಯಕ್ರಮ ಮುಗಿಸಿದರು.

**ನವೆಂಬರ್ 4ನೇ ತಾರೀಖು**

ಬಾಗೇಪಲ್ಲಿಯ ಮೇಘನಾ ಮಿಲ್ ಸಭಾಂಗಣದಲ್ಲಿ ಬೆಳಿಗ್ಗೆ ಸುಮಾರು 10 ಗಂಟೆಗೆ ಪತ್ರೀಜಿಯವರ ಕಾರ್ಯಕ್ರಮ ಪ್ರಾರಂಭವಾಯಿತು.

- ಮೊದಲಗೆ ಕೆಲವು ಪಿರಮಿಡ್ ಮಾಸ್ಟರ್‌ಗಳ ಅನುಭವ ಹಂಚಿಕೊಂಡರು. ನಂತರ, ಪತ್ರೀಜಿಯವರು ಮಾತನಾಡುತ್ತಾ ಧ್ಯಾನದಿಂದ ಜೀವನದಲ್ಲಿ ಆಗುವ ಬದಲಾವಣೆಗಳನ್ನು ಹೇಳಿದರು.
- ಧ್ಯಾನದ ಸಾಧನೆಯಿಂದ, ಜೀವನದ ಗುರಿ ಸ್ಪಷ್ಟವಾಗುತ್ತದೆ. ಭವಿಷ್ಯತ್ತಲ್ಲಿ ಏನು ಮಾಡಬೇಕು ಎಂಬುದರ ಅರಿವು ಇರುತ್ತದೆ. ಧ್ಯಾನವಿಲ್ಲದೆ ಜೀವನದಲ್ಲಿ ಕೇಳಬಾರದ್ದನ್ನು ಕೇಳುತ್ತೇವೆ, ಆಡಬಾರದ್ದನ್ನು ಆಡುತ್ತೇವೆ ಎಂದರು.
- ಧ್ಯಾನ ಸಾಧನೆಯಿಂದ ಜೀವನದಲ್ಲಿ ಮುಂದಿನ ಗುರಿಯ ಸ್ಪಷ್ಟತೆಯ ಬಗ್ಗೆ ಅರಿವು ಮೂಡುವುದನ್ನು ಉಲ್ಲೇಖಿಸಿ, ಬಾಗೇಪಲ್ಲಿ ಕಾರ್ಯಕ್ರಮ ತಮಗೆ ಒಂದು ತಿಂಗಳ ಮೊದಲೇ ತಿಳಿದಿತ್ತು ಎಂದರು. ಅದೇ ರೀತಿ 50 ವರ್ಷಗಳ ನಂತರ, ತಾವು ಏನು ಮಾಡಬೇಕು ಎಂದು ತಮಗೆ ಮುಂಚಿತವಾಗಿ ತಿಳಿದಿದೆ ಎಂದು ಹೇಳಿದರು. ಇದೆಲ್ಲಾ ತವನ್ನು ತಾವು ಮಾಸ್ಟರ್ ಮಾಡಿಕೊಳ್ಳವುದರ ಮೂಲಕ ಸಾಧ್ಯವಾಯಿತು ಎಂದರು.
- ಅದೇ ರೀತಿ ಧ್ಯಾನ ಸಾಧನೆಯಿಂದ ನೀವು ಕೂಡ ಏನು ಮಾಡಬೇಕು? ಎಂದು ಮಾಡಬೇಕು? ಹೇಗೆ ಮಾಡಬೇಕು? ಎಂದು ತಿಳಿಯುವಿರಿ ಎಂದು ಹೇಳಿದರು.
- ಅನ್ಯಥಾ ಶರಣಂ ನಾಸ್ತಿ ಶ್ವಾಸ ಏವ ಶರಣಂ ಮಮ.

'ಬೇರೆ ಯಾವುದಕ್ಕೂ ಶರಣಾಗದೆ ನನ್ನ ಶ್ವಾಸಕ್ಕೆ ಶರಣಾಗುವುದು ಒಂದೇ ನನಗಿರುವ ಮಾರ್ಗ' ಎಂದು ಎಲ್ಲರೂ ಅರಿಯಬೇಕು ಎಂದರು.

- ತಿರುಪತಿ ಯಾತ್ರೆ ಮಾಡಿ ಅಲ್ಲಿ ಲಾಡು ತಿಂದಾಗ ಹಸಿವೆ ಹೋಗುತ್ತೆ. ಬೆಟ್ಟದ ಮೇಲೆ ಪ್ರಕೃತಿಯನ್ನು ಸವಿಯುತ್ತಾ ಉತ್ತಮವಾದ ತಂಗಾಳಿಯಲ್ಲಿ ವಿನೋದವಾಗಿರುತ್ತೆ. ಆದ್ದರಿಂದ ತಿರುಪತಿ ಯಾತ್ರೆ ಒಂದು ವಿನೋದ ಯಾತ್ರೆ ಅಥವಾ ವಿಹಾರಯಾತ್ರೆ ಆಗುತ್ತದೆ ಎಂದರು.
- ದೇವಾಲಯದ ಸುತ್ತ 108 ಪ್ರದಕ್ಷಣೆ ಹಾಕುವುದರಿಂದ ದೇಹಕ್ಕೆ ವ್ಯಾಯಾಮವಾಗುತ್ತದೆ. ಇವೆಲ್ಲಾ ಹೇಗೆ ಆಧ್ಯಾತ್ಮಿಕ ಕ್ರಿಯೆಗಳಾಗುತ್ತವೆ? ಎಂದು ಪ್ರಶ್ನಿಸಿದರು.
- ಗುಡಿ ಅಥವಾ ದೇವಾಲಯ ಎಂದರೆ ದೇಹ. ಗುಡಿಯ ಒಳಗೆ ಎಂದರೆ ದೇಹದ ಒಳಗೆ ಎಂದರ್ಥ. ದೇಹವೆಂಬ ಗುಡಿಯನ್ನು ಶುದ್ಧವಾಗಿರಿಸಿಕೊಳ್ಳಬೇಕು ಹೊರತು ಕಸ, ಸತ್ತ ಪ್ರಾಣಿಗಳ ದೇಹದ ತುಂಡುಗಳ(ಮಾಂಸ) ಹಾಕುವುದು ಪಾಪದ ಕ್ರಿಯೆ ಎಂದರು.
- ದೇವಾಲಯಗಳಿಗೆ ಏಕೆ ಹೋಗಬೇಕು?
  - ಆತ್ಮವೇ ಪರಮಾತ್ಮ, ದೇಹವೇ ದೇಗುಲ, ಜೀವವೇ ದೇವರು. ಆದ್ದರಿಂದ, ದೇಹವೆಂಬ ದೇಗುಲದೊಳಗೆ ಹೋಗಿ ಜೀವವೇ ದೇವರು ಎಂದು ನಮ್ಮನ್ನು ನಾವು ಅರಿಯಬೇಕು ಎಂದರು.

ಧ್ಯಾನದಿಂದ ಶ್ರೀಕೃಷ್ಣ ಅತ್ಯುನ್ನತ ಸ್ಥಿತಿ ಹೊಂದಿ ಆ ಶಕ್ತಿ ಪಡೆದ.

ವಿಶ್ವರೂಪವನ್ನು ಕೃಷ್ಣ ತೋರಿಸಿದ್ದಾನೆಂದರೆ, ಪ್ರತಿಯೊಬ್ಬರಲ್ಲೂ ಅದೇ ಶಕ್ತಿ ಇದ್ದು, ನಿರಂತರ ಸಾಧನೆಯಿಂದ ನಮ್ಮೆಲ್ಲರನ್ನೂ ಮಾಸ್ಟರ್‌ಗಳನ್ನಾಗಿ ಬೆಳೆಸುತ್ತದೆ.

ನೀವು ಕಾಣುವ ಈ 6 ಅಡಿಯ ದೇಹ ನಾನಲ್ಲ.

ಅಹಂ ಬ್ರಹ್ಮಾಸ್ಮಿ, ದೇಹಾಸ್ಮಿ ಅಲ್ಲ, ಸೃಷ್ಟಿಯಲ್ಲಾ ನಾನೇ?

- ಸಾಧನೆಯಿಂದ ಎಲ್ಲರೂ ಕೃಷ್ಣನ ಶಕ್ತಿ ಪಡೆಯಬಹುದು ಮತ್ತು ಆ ಸ್ಥಿತಿ ಹೊಂದಬಹುದು. ಎಲ್ಲರಿಗೂ ಧ್ಯಾನ ಮಾಡುವ, ಆತ್ಮವನ್ನು ಅರಿಯುವ ಶಕ್ತಿ ಇದೆ.
- ನಮ್ಮನ್ನು ನಾವು ತಿಳಿಯುವ ವಿದ್ಯೆಯೇ ಈ ಧ್ಯಾನ ವಿದ್ಯೆ -ಪತ್ರೀಜಿ. ನಂತರ ಎಲ್ಲರಿಂದ "ಜೀವವೇ ದೇವರು, ದೇಹವೇ ದೇವಾಲಯ" ಎಂದು ಹೇಳಿಸಿದರು.
- "ಪತ್ರಿ ನಿತ್ಯ ಕಣ್ಣು ಮುಚ್ಚಿ ಕುಳಿತು ಇದನ್ನು ಅನುಭವದಲ್ಲಿ ಅರಿಯಿರಿ, ನಿಮ್ಮೊಳಗೆ ನೀವು ಪ್ರವೇಶಿಸಿ. ಪ್ರತಿನಿತ್ಯ ದೇಹವೆಂಬ ದೇವಾಲಯ ಪ್ರವೇಶಿಸಬೇಕು. ಇದು ಧ್ಯಾನದಿಂದಲೇ ಸಾಧ್ಯ" ಎಂದು ಹೇಳಿದರು.
- ಶಂಕರಾಚಾರ್ಯರ ಒಂದು ಶ್ಲೋಕ ಹೇಳಿ ಅದರ ಅರ್ಥ ಹೇಳಿದರು (ದೇಹವೇ ದೇವಾಲಯ ಜೀವವೇ ದೇವರು ಇದು ಸನಾತನವಾದದ್ದು - ದೇಹೋ ದೇವಾಲಯ... ಜೀವೋ ದೇವೋ ಸನಾತನಃ)
- ನೀವು ಅಂದುಕೊಂಡಿರುವ ಹಾಗೆ ನಿಮ್ಮ ಮಗು ನಿಮ್ಮ ಮಗು ನಿಮ್ಮದಲ್ಲ, ಆ ಮಗು ಹೋದರೂ, ನೀವು ನಿಮ್ಮದು ಅಂದುಕೊಳ್ಳುವುದು ಅಜ್ಞಾನ. ಧ್ಯಾನದಿಂದಲೇ ಜ್ಞಾನ ಲಭ್ಯ ಎಂದರು.
- ಗರ್ಭಧರಿಸಿದ ಹೆಣ್ಣಿನೊಳಗೆ ದೈವಸ್ಥಿತಿಯಿಂದ ಆತ್ಮ ಯಾವಾಗ ಬೇಕಾದರೂ, ಪ್ರವೇಶಿಸಬಹುದು ಎಂದರು. "ಧ್ಯಾನ ಇಲ್ಲದಿದ್ದರೆ ದೇಹ ತುಕ್ಕು ಹಿಡಿದ ಸ್ಥಿತಿಗೆ ಹೋಗುತ್ತದೆ" ಎಂದರು.
- ತೆಲುಗಿನ ಒಂದು ಗಾದೆಯನ್ನು ಹೇಳಿ, ಧ್ಯಾನವಿಲ್ಲದ ಜೀವನ ಬೆಳಕಿಲ್ಲದ ಜೀವನ. ಕುರುಡು ಎತ್ತು ಹೊಲದಲ್ಲಿ ಬಿದ್ದ ಹಾಗೆ. ಇದರಿಂದ ಹೊಲ ನಾಶ, ಎತ್ತಿಗೆ ನೋವು, ಮುಳ್ಳು, ಕಲ್ಲಿನ ಬಾಧೆ. ಧ್ಯಾನರಹಿತರ ಜೀವನ ಕುರುಡು ಎತ್ತಿನ ಜೀವನವೆಂದು ಹೇಳಿದರು.
- ಮನೆಯಲ್ಲಿ ಕುಳಿತು ದೇಹವೆಂಬ ದೇಗುಲವನ್ನು ಪ್ರವೇಶಿಸದ ಹೊರತು, ಪುಣ್ಯಕ್ಷೇತ್ರಗಳ ಯಾತ್ರೆ ಮಾಡುವುದರಿಂದಸಾಧನೆ ಆಗುವುದಿಲ್ಲ ಎಂದರು.
- ಶ್ರೀಕೃಷ್ಣ ಅರ್ಜುನನಿಗೆ ತಾನು ವಿಶ್ವ ವ್ಯಾಪಿಯಾಗಿದ್ದೇನೆ ಎಂದು ಹೇಳಿದಾಗ, ಅರ್ಜುನ ಕೃಷ್ಣನನ್ನು ಎಲ್ಲಾ ಕಡೆ ವ್ಯಾಪಿಸಿರುವುದು ಕಾಣುತ್ತಾನೆ.
- ಯೋಗೀ ಭವಾರ್ಜುನ ಅಂತ ಯೋಗೀಶ್ವರ ಹೇಳಿದೆ
    - ರೋಗಿಯು ಯೋಗಿಯಾಗಲು ಬೇಕಾಗಿರುವ ಸಂದೇಶ ಗೀತೆಯಲ್ಲಿದೆ
    - ವಿಷಾದ ಹೋಗಲು ಧ್ಯಾನ ಬೇಕು
    - ಯೋಗಿಯಾದವನು ಮಾತ್ರ ಯೋಗ ಕಲಿಸುತ್ತಾನೆ

ಉದಾಹರಣೆ: ನುರಿತ ಸಂಗೀತಗಾರ ಮಾತ್ರ ಸಂಗೀತ ಕಲಿಸಲು ಸಾಧ್ಯ. ಸಮಯ ವ್ಯರ್ಥ ಮಾಡಬೇಡಿ. ಕಲಿಯಲು ಅನೇಕ ವಿದ್ಯೆಗಳಿವೆ. ದೇಹವೆಂಬ ಗುಡಿಯೊಳಗೆ ಹೋಗಿ ದೇವರ ಸಾಧನೆ ಮಾಡಿ. ಅದರಿಂದ ಜನ್ಮ ರಾಹಿತ್ಯವನ್ನು ಹೊಂದುವೆವು. ಶ್ರೀಕೃಷ್ಣ ಸಹ ಇದನ್ನು ಹೇಳಿದ್ದಾನೆ - "ಬ್ರಹ್ಮಲೋಕಕ್ಕೆ ಹೋದರೂ ಮತ್ತೆ ಬರಬೇಕು; ನಾನಿರುವ ಸ್ಥಿತಿ ತಲುಪಿದರೆ ಪುನರ್ಜನ್ಮ ಇಲ್ಲ" ಎಂದು ಹೇಳಿ ಪತ್ರೀಜಿಯವರು ಕಾರ್ಯಕ್ರಮ ಮುಗಿಸಿದರು.

### ನವೆಂಬರ್ 5ನೇ ತಾರೀಖು

ಬ್ರಹ್ಮರ್ಷಿ ಪತ್ರೀಜಿಯವರು ನವೆಂಬರ್ 5 ಸಂಜೆ 5:45 ಗಂಟೆಗಳಿಗೆ ರಾಯಚೂರು ನಗರಕ್ಕೆ ಆಗಮಿಸಿದ್ದರು. ಸ್ಟೇಷನ್ ರಸ್ತೆಯಲ್ಲಿರುವ ಶ್ರೀ ಮಲ್ಲನ್ ನಾರಾಯಣ ಕಲ್ಯಾಣ ಮಂಟಪದಲ್ಲಿ 6:10ಕ್ಕೆ ಧ್ಯಾನ ಶಿಕ್ಷಣ ಶಿಬಿರವನ್ನು ಪ್ರಾರಂಭಿಸಿದರು. ಮೊದಲನೆಯದಾಗಿ ಮಕ್ಕಳ ವಿಭಾಗವಾದ 'ವಿಜಯಲಕ್ಷ್ಮಿ ಪಿರಮಿಡ್ ಮೆಡಿಟೇಷನ್ ಟೀಚಿಂಗ್ ಸೆಂಟರ್ ಫಾರ್ ದ ಯಂಗ್ ಮಾಸ್ಟರ್ಸ್'ನ ಮಕ್ಕಳು ಧ್ಯಾನ ಮಾಡಲೇಬೇಕು ಎಂಬ ಹಾಡಿನಿಂದ ಕಾರ್ಯಕ್ರಮವನ್ನು ಪ್ರಾರಂಭಿಸಿದರು. ನಂತರ, ಒಂದು ನೃತ್ಯ ಪ್ರದರ್ಶನವಿತ್ತು. ಬ್ರಹ್ಮರ್ಷಿ ಪತ್ರೀಜಿಯವರು ಎಲ್ಲಾ ಮಕ್ಕಳ ಸಲುವಾಗಿ ನೆರೆದಿರುವ ಎಲ್ಲಾ ಶಿಬಿರಾರ್ಥಿಗಳ ಜೊತೆ 10 ನಿಮಿಷಗಳ ಕಾಲ ಮಕ್ಕಳಿಗಾಗಿ ಧ್ಯಾನ ಮಾಡಿಸಿ, ನಂತರ, ಮಕ್ಕಳೆಲ್ಲಾ ಆಟ ಆಡೋಕ್ಕೆ ಕಳಿಸಿದರು. ನಂತರ, 45 ನಿಮಿಷ ಧ್ಯಾನವನ್ನು ಮಾಡಿಸಿದ್ದರು.

ಧ್ಯಾನ ಮಾಡುವಾಗ ಧ್ಯಾನದ ವೈಶಿಷ್ಟ್ಯ ಮತ್ತು ಧ್ಯಾನದಿಂದ ಆಗುವ ಲಾಭಗಳ ಬಗ್ಗೆ ತಿಳಿಸಿದರು. ನಂತರ, ಪ್ರತಿ ದಿನ ಧ್ಯಾನ ಮಾಡುವುದು ಎಷ್ಟು ಮುಖ್ಯ ಅಂತ ತಿಳಿಸಿದರು. ಈ ಶಿಬಿರಕ್ಕೆ ಗುಲಬರ್ಗಾದಿಂದ ಮತ್ತು ಆದೋನಿಯಿಂದ ಮಾಸ್ಟರ್ಸ್ ಬಂದಿದ್ದರು. ಈ ಶಿಬಿರದಲ್ಲಿ 500 ಕ್ಕಿಂತ ಹೆಚ್ಚು ಜನರು ಮತ್ತು 70 ಕ್ಕಿಂತ ಹೆಚ್ಚು ವಿಜಯಲಕ್ಷ್ಮಿ ಪಿರಮಿಡ್ ಮೆಡಿಟೇಷನ್ ಟೀಚಿಂಗ್ ಸೆಂಟರ್ ಫಾರ್ ಯಂಗ್ ಮಾಸ್ಟರ್ಸ್ ನ ಮಕ್ಕಳು ಇದ್ದರು.

- ಸುಧಾಕರ್ ರೆಡ್ಡಿ, ಬೆಂಗಳೂರು

### ಕರ್ನಾಟಕ ರಾಜ್ಯ ವಿಧಾನ ಸಭೆಯ ಸ್ಪೀಕರ್ ಪಿರಮಿಡ್ ಭೇಟಿ

ಅಕ್ಟೋಬರ್ 19ನೇ ತಾರೀಖು ಕರ್ನಾಟಕ ರಾಜ್ಯ ವಿಧಾನ ಸಭೆಯ ಸ್ಪೀಕರ್ ಶ್ರೀ ಜಗದೀಶ್ ಶೆಟ್ಟರ್ ಅವರು ಪಿರಮಿಡ್ ವ್ಯಾಲಿಯನ್ನು ಸಂದರ್ಶಿಸಿದರು. ವ್ಯಾಲಿಯಲ್ಲಿ ಎಲ್ಲಾ ಪ್ರದೇಶಗಳನ್ನು ಸಂದರ್ಶಿಸುತ್ತಾ ಧ್ಯಾನ ವಿಶೇಷಗಳನ್ನು ಆಸಕ್ತಿಯಿಂದ ಕೇಳಿ ತಿಳಿದುಕೊಳ್ಳುತ್ತಾ ಪಿರಮಿಡ್‌ನಲ್ಲಿ ಸ್ವಲ್ಪಹೊತ್ತು ಧ್ಯಾನ ಮಾಡಿದರು. ಅವರ ಜೊತೆ ಹುಬ್ಬಳ್ಳಿ - ಧಾರವಾಡ ಮೇಯರ್ ಅವರು ಸಹಿತ ಇದ್ದರು. ಅವರು ಪಿರಮಿಡ್ ದರ್ಶನ ಸ್ಫೂರ್ತಿಯಿಂದ ಹುಬ್ಬಳ್ಳಿಯಲ್ಲಿ ತಮ್ಮ ಪ್ರದೇಶದಲ್ಲಿ ಈ ತರಹದ ಪಿರಮಿಡ್ ಕಟ್ಟಬೇಕೆಂದು ತಮ್ಮ ಅಭಿಪ್ರಾಯವನ್ನು ತಿಳಿಸಿದರು. ಪಿರಮಿಡ್ ವ್ಯಾಲಿ ಇಂಜನಿಯರ್, ಶ್ರೀ ಪಿ.ಎಸ್.ಆರ್.ಕೆ. ಪ್ರಸಾದ್ ಅವರು ತಕ್ಷಣ ಸ್ಪಂದಿಸುತ್ತಾ ಅವಶ್ಯಕ ಸಲಹಾ, ಸಹಕಾರಗಳನ್ನು ತಿಳಿಸುತ್ತೇವೆಂದರು. ಶ್ರೀ ಐ.ವಿ.ರೆಡ್ಡಿ, ಮೆನೇಜಿಂಗ್ ಟ್ರಸ್ಟೀ ಅವರಿಗೆ ಗೌರವಪೂರ್ವಕ ಸ್ವಾಗತ ನೀಡಿದರು.

# ತಾಂಡವ ಶಿವ ಸಂಗೀತ ನೃತ್ಯ ಧ್ಯಾನ ಮಹಾಯಜ್ಞ – 2009

**ಬ್ರಹ್ಮರ್ಷಿ ಪತ್ರೀಜಿ ನೀಡಿರುವ ಜ್ಞಾನ ಸಂಪತ್ತಿನಿಂದ ... ನಮ್ಮ ಸ್ವಾನುಭವದಿಂದ...**

**ಶ್ರೀಶೈಲ ಧ್ಯಾನ ಮಹಾಯಜ್ಞವನ್ನು ಉತ್ಸವದ ಹಾಗೆ ಆಚರಿಸೋಣ.**

ಹೆಸರು ಕೇಳುತ್ತಲೇ ತಿಳಿಯದ ತನ್ಮಯತ್ವ – ಆತ್ಮಾನಂದ ಅದೊಂದು ತರಹ ಸಂಭ್ರಮ.

ಆಧ್ಯಾತ್ಮಿಕತೆ ಅಂದರೇನೆ 'ತನ್ನ ಜೊತೆ ತಾನು ಇರುತ್ತಾ' ಎಲ್ಲರನ್ನೂ ಸೇರಿಸಿಕೊಳ್ಳುವುದು.

ಆದಕ್ಕೇ ಈ ಸಲ **ಬ್ರಹ್ಮರ್ಷಿ ಪತ್ರೀಜಿ** ನೀಡಿರುವ **'ಚಲೋ ಶ್ರೀಶೈಲ'** ನಿನಾದದಿಂದ ಪ್ರತಿ ಪಿರಮಿಡ್ ಮಾಸ್ಟರ್, ಒಬ್ಬ ತಾಂಡವ ಶಿವನಾಗಬೇಕು. ಯಾವ ತರಹ... ಉಕ್ಕಿ ಹರಿಯುವ ಕೃಷ್ಣಾನದಿ ಪ್ರವಾಹಕ್ಕೆ, ಶ್ರೀಶೈಲ, ನಾಗಾರ್ಜುನ ಸಾಗರ್, ಪ್ರಕಾಶಂ ಬ್ಯಾರೇಜ್ ತರಹದ ಕಟ್ಟಡಗಳು ಅಡ್ಡ ನಿಲ್ಲಲಾರದೆ ಶರಣಾಗಿಬಿಟ್ಟಿದೆಯೋ, ಅದೇ ವಿಧವಾಗಿ **"ಪಿರಮಿಡ್ ಸ್ಪಿರಿಚ್ಯುವಲ್ ಸೊಸೈಟೀಸ್"** ಮೂವ್‌ಮೆಂಟ್ ಪ್ರಪಂಚದ ಮಾನವರಲ್ಲಿ ಉಳಿದಿರುವ ಹಿಂಸಾ ಪ್ರವೃತ್ತಿಯನ್ನು ನಿರ್ಮೂಲನಗೊಳಿಸಬೇಕು. **"ಆನಾಪಾನಸತಿ"** ಎಂಬುವ ವಜ್ರಾಯುಧದಿಂದ ಎಲ್ಲಾ ಮಾನವರಲ್ಲಿರುವ ದೈವತ್ವವನ್ನು ಎಚ್ಚರಿಸುವುದು. ಮುಂದಿನ ಪೀಳಿಗೆಗೆ ನೂತನ **"ಶಾಕಾಹಾರ ಪಿರಮಿಡ್ ಧ್ಯಾನ ಪ್ರಪಂಚವನ್ನು"** ನೀಡಬೇಕು. ಈ ಆಶಯ ಸಾಧಿಸುವುದಕ್ಕಾಗಿಯೇ **ಬ್ರಹ್ಮರ್ಷಿ ಪತ್ರೀಜಿ "2012 ಧ್ಯಾನಜಗತ್"** ಗೆ ಕೃಷಿ ಮಾಡುತ್ತಿದ್ದಾರೆ. ನಾವು ನಿರ್ವಹಿಸುವ ಧ್ಯಾನ ಮಹಾಯಜ್ಞಗಳು ಈ ಆಶಯ ಸಾಧನೆಯ ಭಾಗವಾಗಿವೆ!

ಈ ವರ್ಷದ ಅಂತ್ಯದಲ್ಲಿ (ಡಿಸೆಂಬರ್ 25 ರಿಂದ 31 ರವರೆಗೆ) ನಿರ್ವಹಿಸುತ್ತಲಿರುವ **"ತಾಂಡವ ಶಿವ ಸಂಗೀತ ನೃತ್ಯ ಧ್ಯಾನ ಮಹಾಯಜ್ಞ – 2009"** ಇದರ ಧ್ಯಾನ, ಜ್ಞಾನ, ಶಕ್ತಿ, ಪ್ರಕಂಪನೆಗಳು ಪ್ರಪಂಚದ ನಾಲ್ಕು ಮೂಲೆಗಳಲ್ಲಿ ವಿಸ್ತರಿಸಲು ನಾವೆಲ್ಲಾ ಕೂಡಿ ಕೃಷಿ ಮಾಡೋಣ!

ಇದಕ್ಕಾಗಿ **ಬ್ರಹ್ಮರ್ಷಿ ಪತ್ರೀಜಿ "ವರ್ಕಿಂಗ್ ಕಮಿಟಿ", "ಫೈನಾನ್ಸ್ ಕಮಿಟಿ"** ಗಳನ್ನು ನಿಯಮಿಸಲಾಗಿದೆ. ಈ ಕಮಿಟಿಗಳು ಪ್ರತಿ ಜಿಲ್ಲೆಯಲ್ಲಿರುವ ಜಿಲ್ಲೆ ಕಮಿಟಿಗಳನ್ನೂ, ಚಂದಾಗಾಗಿ ರಶೀದು ಪುಸ್ತಕಗಳ ಜೊತೆ **"ಚಲೋ ಶ್ರೀಶೈಲಂ"** ಬ್ರೋಚರ್‌ಗಳನ್ನು ಸಹ ನೀಡಲಾಗಿದೆ. ಆದ್ದರಿಂದ, ಪ್ರತಿ ಪಿರಮಿಡ್ ಮಾಸ್ಟರ್ಸ್ ಕಾರ್ಯಪ್ರವೃತ್ತವಾಗಬೇಕೆಂದು ವಿನಂತಿ! ನಿಮ್ಮ ನಿಮ್ಮ ಜಿಲ್ಲೆಗಳಿಂದ ನಿಮಗೆ ಬೇಕಾಗಿರುವ ಸಮಾಚಾರವನ್ನು ತಿಳಿದುಕೊಂಡು ಪ್ರಜೆಗಳನ್ನು ಚೈತನ್ಯವಂತರನ್ನಾಗಿ ಮಾಡಿ ಶ್ರೀಶೈಲ ಧ್ಯಾನ ಮಹಾಯಜ್ಞ ಪ್ರಭಂಜನದಲ್ಲಿ ಪಾಲ್ಗೊಳ್ಳೋಣ!

ಅಷ್ಟೇ ಅಲ್ಲ! ಕರ್ನಾಟಕದಲ್ಲಿರುವ ಎಲ್ಲಾ ಜಿಲ್ಲೆಗಳು, ಪಟ್ಟಣಗಳು, ಗ್ರಾಮಗಳಿಂದ ಶ್ರೀಶೈಲ ಧ್ಯಾನ ಮಹಾಯಜ್ಞಕ್ಕೆ ಎಷ್ಟು ಜನ ಬರುತ್ತಿದ್ದಾರೋ, ನವಂಬರ್ ತಿಂಗಳ ಕೊನೆಯಲ್ಲಿ ತಿಳಿಸಲ್ಪಟ್ಟರೆ, ಎಲ್ಲರಿಗೂ **ಅನುಕೂಲವಾದ ವಸತಿ ಸೌಕರ್ಯವನ್ನು** ಕಲ್ಪಿಸಲು ನಮ್ಮ ಕಡೆಯಿಂದ ಅನುಕೂಲ ಮಾಡಲು ಸಹಾಯವಾಗುತ್ತದೆ; ಎಲ್ಲರೂ ಸಹಕರಿಸಬೇಕಾಗಿ ವಿನಂತಿ.

**ಸಂಚಾಲಕರು :**

**ಜಕ್ಕಾ ರಾಘವ ರಾವು,** ಯೋಜನಾ ಅಧ್ಯಕ್ಷರು **– 09848170801; ಪಾಲ್ ವಿಜಯ್ ಕುಮಾರ್ – 09448277513; ಎಂ. ಪ್ರೇಮ್‌ನಾಥ್ – 09866721766; ಮಾರಂ ಶಿವಪ್ರಸಾದ್ – 09347242373; ಮೆಗಾ ಮುರಳಿ – 09346521882; ಡಿ. ಕೇಶವ ರಾಜು – 09440077359; ನಂದಪ್ರಸಾದ ರಾವು – 09246636854;**

ಶ್ರೀಶೈಲದಲ್ಲಿ... ವಸತಿ ವಿವರಗಳು

ಈ ಶ್ರೀಶೈಲ ಧ್ಯಾನ ಮಹಾಯಜ್ಞ ಸಂದರ್ಭದಲ್ಲಿ, ಶ್ರೀಶೈಲದಲ್ಲಿ ನಮ್ಮ ವಸತಿ ವ್ಯವಸ್ಥೆಗಳನ್ನು ನಾವು ನಾವೇ ಮಾಡಿಕೊಂಡರೆ, ಹೊಸದಾಗಿ ಬರುವವರಿಗೆ ತುಂಬಾ ಅನುಕೂಲವಾಗಿರುತ್ತದೆ. ಶ್ರೀಶೈಲದಲ್ಲಿ ಬಹಳಷ್ಟು ಛತ್ರಗಳಿವೆ. ಧ್ಯಾನ ಮಹಾಯಜ್ಞ ನಿರ್ವಹಣ ಕಮಿಟಿಯು ರೂಂಗಳು, ಹಾಲ್‌ಗಳು, ಡಾರ್ಮಿಟರಿಗಳು ಬಹಳಷ್ಟು ಬುಕ್ ಮಾಡುತ್ತವೆ. ಆದರೆ, ಅಲ್ಲಿರುವ ಎಲ್ಲಾ ರೂಂಗಳನ್ನು ಕಮಿಟಿಯವರಿಗೆ ಕೊಡುವುದಿಲ್ಲ, ಬರುವವರು ತಾವೇ ತಮ್ಮ ವಸತಿ ವ್ಯವಸ್ಥೆಯನ್ನು ಬುಕ್ ಮಾಡಿಕೊಳ್ಳುವುದರಿಂದ ನಿರ್ವಹಣ ಕಮಿಟಿಗೆ ಬಹಳಷ್ಟು ಅನುಕೂಲವಾಗುತ್ತದೆ.



ಬ್ರಹ್ಮರ್ಷಿ ಸುಭಾಷ್ ಪತ್ರೀಜಿ

# ಜೀಸಸ್ ಕ್ರೈಸ್ಟ್



ಮೈ ಡಿಯರ್ ಫ್ರೆಂಡ್ಸ್! ಮೈ ಡಿಯರ್ ಮಾಸ್ಟರ್ಸ್! ಮೈ ಡಿಯರ್ ಗಾಡ್!

ಈಗ ನಾವು ಶ್ರೀ ಜೀಸಸ್ ಕ್ರೈಸ್ಟ್‌ರವರನ್ನು ಕುರಿತು, ಅವರ ಅದ್ಭುತವಾದ ಪ್ರಬೋಧೆಯನ್ನು ಕುರಿತು ಸವಿವರವಾಗಿ, ಪೂರ್ತಿ ಅರ್ಥದೊಂದಿಗೆ ತಿಳಿದುಕೊಳ್ಳೋಣ.

ನಾವು ಅದೇ ಆಗುತ್ತೇವೆ. ಆದ್ದರಿಂದ, ಜೀಸಸ್‌ರವರ ಪ್ರಬೋಧೆಯನ್ನು ಕೂಡ ನಾವು ಆಗಾಗ್ಗೆ ಮತ್ತೆ ಮತ್ತೆ ಕೇಳುತ್ತಿದ್ದರೆ, ಆಧ್ಯಾತ್ಮಿಕ ಸತ್ಯಗಳೆಲ್ಲ ಕ್ರಮಕ್ರಮವಾಗಿ, ಪೂರ್ತಿಯಾಗಿ ಮನನವಾಗಿ, ಅವೆಲ್ಲ ಪೂರ್ತಿ ಜೀರ್ಣಿಸಿಕೊಂಡು, ನಮ್ಮ ಜೀವನದಲ್ಲಿ ಕೂಡಾ ಅವು ಕಾರ್ಯರೂಪಕ್ಕೆ ಬಂದು ಕೊನೆಗೆ ನಾವೂ ಸಹ ಜೀಸಸ್ ತರಹ ತಯಾರಾಗುತ್ತೇವೆ.

### "ಜಗದ್ಗುರುಗಳು!"

ನಿಜವಾಗಿ ಪಿರಮಿಡ್ ಮಾಸ್ಟರ್‌ರೆಲ್ಲರಿಗೂ, ಧ್ಯಾನ ಪ್ರಪಂಚಕ್ಕೆಲ್ಲ , ಜ್ಞಾನ ಪ್ರಪಂಚಕ್ಕೆಲ್ಲ ಹಾಗೂ ಪೂರ್ತಿ ಮಾನವರೆಲ್ಲರಿಗೂ ಈ ಒಂದು ಜಗದ್ಗುರುಗಳ ಸಮೂಹ - ಅಂದರೆ, ಶ್ರೀ ಕೃಷ್ಣನಾಗಲಿ, ಶ್ರೀ ಬುದ್ಧ, ಶ್ರೀ ಜೀಸಸ್, ಶ್ರೀ ಶಂಕರಾಚಾರ್ಯರು, ಶ್ರೀ ಮಹಮ್ಮದ್ ಆಗಲಿ - ಇವರೆಲ್ಲರ ದಿವ್ಯಜೀವನ ದಿವ್ಯಪ್ರಬೋಧೆಗಳು, ಮೌಲಿಕವಾದ ಆದರ್ಶ ಸೂತ್ರಗಳು - ಇವೆಲ್ಲ ಸುವಿದಿತಗಳೇ! ಇವರೆಲ್ಲರೂ ಜಗದ್ಗುರುಗಳು! 'ಜಗತ್' ಮಾನ್ಯರೆಲ್ಲ ಕೂಡ ಇವರ ಶಿಷ್ಯರು! ಪಿರಮಿಡ್ ಮಾಸ್ಟರರೆಲ್ಲರೂ ಕೂಡ ಆಗಾಗ್ಗೆ ಶ್ರೀ ಜೀಸಸ್‌ರವರನ್ನೂ ಕುರಿತು, ಅವರ ದಿವ್ಯಬೋಧನೆಗಳೆಲ್ಲದನ್ನೂ ನಿರಂತರ ತಿಳಿದುಕೊಳ್ಳುತ್ತಿರುತ್ತಾರೆ! ಇವರ ಮೂಲಕ ತಿಳಿದ ಸತ್ಯಗಳನ್ನು ಜೀರ್ಣಿಸಿಕೊಳ್ಳುತ್ತಿರುತ್ತಾರೆ. ಯಾವುದು ಜೀರ್ಣವಾಗುತ್ತದೋ ಅದೇ ನಮ್ಮ ದೈನಂದಿನ ಜೀವನದಲ್ಲಿ ತನ್ನಷ್ಟಕ್ಕೆ ತಾನೇ ಪ್ರತಿಬಿಂಬಿಸುತ್ತದೆ.

### "ಆತ್ಮಶಾಸ್ತ್ರ"

1)ಶ್ರವಣ, 2)ಮನನ, 3)ನಿಧಿಧ್ಯಾಸನ, 4)ಸಾಕ್ಷಾತ್ಕಾರ - ಈ ನಾಲ್ಕು ಜ್ಞಾನಯೋಗದ ಅಂಶಗಳು ಮೌಲಿಕವಾಗಿ "ಆತ್ಮಶಾಸ್ತ್ರ"ದಲ್ಲಿವೆ. 'ಶ್ರವಣ' ಅಂದರೆ ಚೆನ್ನಾಗಿ ಕೇಳಿಸಿಕೊಳ್ಳುವುದು. 'ಮನನ' ಅಂದರೆ ಜೀರ್ಣಿಸಿಕೊಳ್ಳುವುದು; ಕೇಳಿದ್ದನ್ನು ಪದೇ ಪದೇ ಅರ್ಥಮಾಡಿಕೊಳ್ಳಲು ಪ್ರಯತ್ನಿಸುವುದು. 'ನಿಧಿಧ್ಯಾಸನ' ಅಂದರೆ, ನಮ್ಮ ಜೀವನದಲ್ಲಿ ನಾವು ಮಾಡುವ ಚರ್ಯೆಗಳು. ಮನನದ ತರುವಾಯ, ನಮ್ಮಿಂದ ಹೊರಬರುವ ಆ ಒಂದು ಚರ್ಯೆಗಳೇ, ಆ ಒಂದು ಅಭ್ಯಾಸವೇ 'ನಿಧಿಧ್ಯಾಸನ'. ಕೊನೆಯದಾಗಿ, 'ಸಾಕ್ಷಾತ್ಕಾರ' ನಾವು ಹೊಂದುತ್ತೇವೆ. ಅಂದರೆ, ಯಾವುದನ್ನು ಕೇಳಿದ್ದೇವೋ, ಅದನ್ನು ಮೊದಲು ಜೀರ್ಣ ಮಾಡಿಕೊಳ್ಳಬೇಕು; ಆಗಲೇ ನಾವದರಲ್ಲಿ ಜೀವಿಸುತ್ತೇವೆ. ಪರಂಪರಾಗತವಾಗಿ ಅದರ ಸಾಕಾರವಾಗಿ, ಮತ್ತೊಂದು ರೂಪದಲ್ಲಿ ನಾವು ತಯಾರಾಗುತ್ತೇವೆ! ಮೊಟ್ಟಮೊದಲನೆಯದಾದ 'ಶ್ರವಣ' ಕ್ರಮಕ್ರಮವಾಗಿ ರೂಪಾಂತರ ಹೊಂದಿ, ಕಟ್ಟಕಡೆಯಲ್ಲಿ ನಮ್ಮಲ್ಲಿ ಪೂರ್ತಿ 'ಸಾಕ್ಷಾತ್ಕಾರ' ಹೊಂದಿ,

### "ದೇವರ ರಾಜ್ಯ"

ಮೊಟ್ಟಮೊದಲಿಗೆ, ನಮಗೆ ಗಮನಕ್ಕೆ ಬರುವುದೇನೆಂದರೆ ಜೀಸಸ್ ಹೇಳಿದ್ದಾರೆ. "Seek ye the Kingdom of God, and his righteousness first, and, then all else will be added unto you. "seek ye the Kingdom of god". ಆ ದೇವರ ಸಾಮ್ರಾಜ್ಯ ಸಂಪಾದಿಸಲಿಕ್ಕಾಗಿ ಪ್ರಯತ್ನಿಸಬೇಕು. "And his righteousness" ಅಂದರೆ "ಸಮಾಜವು ಧರ್ಮವಲ್ಲ". "righteousness" ಅಂದರೆ 'ಆಧ್ಯಾತ್ಮಿಕ ಧರ್ಮ' ನಮ್ಮ ಸಮಾಜ, ನಮ್ಮ ಮೂರ್ಖ ತಂದೆತಾಯಿಯರು ಒಂದು ವಿಧವಾದ ಧರ್ಮ ಹೇಳಿದ್ದಾರೆ ನಮಗೆ; ಅದು ಸರಿಯಾದುದಲ್ಲ, ಶ್ರೀ ಕೃಷ್ಣನ ಬಾಯಿಂದ, ಗೌತಮ ಬುದ್ಧನ ಬಾಯಿಂದ ಬಂದಿರುವ ಧರ್ಮವನ್ನೇ ನಾವು ಅನುಸರಿಸಬೇಕು. ಆಗಲೇ ನಮಗೆ ಬೇಕಾದ್ದೆಲ್ಲ ಪುಷ್ಕಳವಾಗಿ ಲಭಿಸುತ್ತವೆ. ಇದನ್ನೇ ಭಗವದ್ಗೀತೆಯಲ್ಲಿ-

**"ಯತ್ರ ಯೋಗೇಶ್ವರ ಕೃಷ್ಣ ಯತ್ರ ಪಾರ್ಥೋ ಧನುರ್ಧರಃ**
**ತತ್ರ ಶ್ರೀ ವಿಜಯಾ ಭೂತಿಃ ಧ್ರುವಾ ನೀತಿರ್ಮತಿರ್ಮಮ"**

"ಯತ್ರ ಯೋಗೇಶ್ವರ ಕೃಷ್ಣ" ಅಂದರೆ, ಯೋಗದಲ್ಲೇ ನಾವು ದೇವರ ರಾಜ್ಯದಲ್ಲಿ ಪ್ರವೇಶಿಸುತ್ತೇವೆ. ಆಗ ನಮಗೆ ಬೇಕಾದುದೆಲ್ಲ ನಮ್ಮ ಹತ್ತಿರ ಸೇರುತ್ತವೆ. ಅಂದರೆ, 'ಶ್ರೀ', 'ವಿಜಯ', 'ಭೂತಿ' 'ಧ್ರುವಾನೀತಿ' ಈ ನಾಲ್ಕು ಧರ್ಮಾರ್ಥ ಕಾಮ ಮೋಕ್ಷ!"

### "ದೇವರ ರಾಜ್ಯ, ನಿನ್ನ ಒಳಗಡೆ ಇದೆ"!

'ಶ್ರೀ' ಅಂದರೆ 'ಅರ್ಥ'; 'ವಿಜಯ' ಅಂದರೆ 'ಮೋಕ್ಷ'; 'ಭೂತಿ' ಅಂದರೆ 'ಕಾಮ'; 'ಧ್ರುವಾನೀತಿ' ಅಂದರೆ 'ಧರ್ಮ'... ಚತುರ್ವಿಧ ಪುರುಷಾರ್ಥಗಳಾದ ಈ ನಾಲ್ಕನ್ನು ಧ್ಯಾನದ ಮೂಲಕವೇ ನಾವು ಪಡೆದಾಗಲೇ ದೇವರ ರಾಜ್ಯದಲ್ಲಿ ಪ್ರವೇಶಿಸುತ್ತೇವೆ.

ಜೀಸಸ್‌ನನ್ನು ಎಲ್ಲರೂ ಕೇಳುತ್ತಾರೆ. "ಈ ದೇವರ ರಾಜ್ಯ ಎಲ್ಲಿದೆ?" ಎಂದು "ಅದು ನಿನ್ನೊಳಗಡೆ ಇದೆ" ಎನ್ನುತ್ತಾನೆ ಜೀಸಸ್. "the Kingdom of god is within!" ಅದು ಹೊರಗೆಲ್ಲೂ ಇಲ್ಲ; ದೇವರ ರಾಜ್ಯ ಬೆತ್ಲೆಹೇಮಿನಲ್ಲಿಲ್ಲ! ಮಕ್ಕಾಮಸೀದಿಗಳಲಿಲ್ಲ! ನಾವು ಅಂತರ್ಮುಖಿಗಳಾಗಬೇಕು. ಆಗಲೇ ನಾವು ದೇವರ ರಾಜ್ಯದಲ್ಲಿ ಪ್ರವೇಶಿಸಬಲ್ಲೆವು.

ಪ್ರಪಂಚವೆಲ್ಲ ಏಕೆ ದುಃಖಮಯವಾಗಿ ಇದೆಯೆಂದರೆ, ಯಾರೂ ಕೂಡ ದೇವರ ರಾಜ್ಯದಲ್ಲಿ ಸೇರುತ್ತಿಲ್ಲ! ದೇವರ ರಾಜ್ಯದಲ್ಲಿ ಪ್ರವೇಶಿಸಲಿಕ್ಕೆ ಸಾಸಿವೆಯಷ್ಟಾದರೂ ಯಾರೂ ಶ್ರದ್ಧೆ ತೋರುತ್ತಿಲ್ಲ! ಅದು 'ಒಳಗೆ' ಇದೆ. ಮನುಷ್ಯರೆಲ್ಲ 'ಹೊರಗಡೆ' ತಿರುಗುತ್ತಿದ್ದಾರೆ. ಆದ್ದರಿಂದಲೇ, ಅವರು ಹೊಂದಬೇಕಾಗಿರುವುದನ್ನು ಹೊಂದುತ್ತಿಲ್ಲ.

## "ದಿವ್ಯ-ಆತ್ಮ-ಪುತ್ರರು"!

ಜೀಸಸ್ ಹೇಳುತ್ತಾರೆ, "I am the son of God" "ನಾನು ದೇವರ ಪುತ್ರ" ಎಂದು ನಿಗರ್ವಿಯಾಗಿ ಹೇಳುತ್ತಾರೆ. ಪ್ರತಿಯೊಬ್ಬರೂ ದೇವರ ಪುತ್ರನಾಗಲೇಬೇಕು! ನಾವೆಲ್ಲರೂ ಕೂಡ ಭೌತಿಕವಾದ ತಾಯಿ ಪುತ್ರರಾಗಿ ತಂದೆಯ ಪುತ್ರರಾಗಿ ನಮ್ಮನ್ನು ನಾವು ಗುರ್ತಿಸಿಕೊಳ್ಳುತೇವೆ. ವಾಸ್ತವವಾಗಿ ನಾವೆಲ್ಲರೂ ದಿವ್ಯಾತ್ಮ ಪುತ್ರರೆ! ಇದು ಜೀಸಸ್ ತಿಳಿದುಕೊಂಡಿದ್ದರು. ನಾವು ಅದೇ ವಿಧವಾಗಿ ತಿಳಿದು ಕೊಳ್ಳಬೇಕು. "I and you are one" – "ನಾನು ನೀನು ಒಂದೇ" ಎಂದೂ ಸಹ ಹೇಳಿದ್ದಾರೆ. ಪ್ರತಿ ಮನುಷ್ಯ ದೇವರ ಮಗನೇ!

## "ನಲವತ್ತು ದಿನಗಳ ಉಪವಾಸ"!

ಯಾವ ಮಾಸ್ಟರಾದರೂ, ಆಧ್ಯಾತ್ಮಿಕ ಶಾಸ್ತ್ರಜ್ಞನಾದರೂ, ಯೋಗಿಯಾದರೂ ಪ್ರಬೋಧಿಸುವುದು, ಅವರು ಅನುಭವಿಸಿದ ಸರ್ವಾತ್ಮ ಏಕತ್ವವನ್ನೇ! ಜೀಸಸ್ ಆ ದೇವರ ರಾಜ್ಯದಲ್ಲಿ ಪ್ರವೇಶಿಸುವ ಮಾರ್ಗ ಕೂಡ ಹೇಳಿದ್ದಾರೆ. "I fasted for forty days" ಎನ್ನುತ್ತಾರೆ. "ನಾನು ನಲವತ್ತು ದಿವಸಗಳು ಉಪವಾಸ ಮಾಡಿದ್ದೇನೆ" ಎಂದರ್ಥ.

"ನಲವತ್ತು ದಿವಸಗಳು ಉಪವಾಸ" ಮಾಡಿದೆ ಎಂದರೆ, ನಲವತ್ತು ದಿನಗಳು ನಾನು ಯಾವ ಆಲೋಚನೆಗಳಿಲ್ಲದೆ ಅದ್ಭುತವಾದ 'ಧ್ಯಾನ' ಮುದ್ರೆಯಲ್ಲಿ 'ಧ್ಯಾನ' ಸ್ಥಿತಿಯಲ್ಲಿ ಇದ್ದೆ 'ಸಮಾಧಿ ಸ್ಥಿತಿ'ಯಲ್ಲಿದ್ದೆ ಎಂದು ತನ್ನನ್ನು ಕುರಿತು ಹೇಳಿಕೊಂಡಿದ್ದಾರೆ. ಯಾವ ಅಡಚಣೆ ಇಲ್ಲದೆ ನಿರಂತರವಾಗಿ ನಲವತ್ತು ದಿನಗಳು ಆತ ಕಣ್ಣೆರಡು ಮುಚ್ಚಿಕೊಂಡು 'ಶ್ವಾಸದ ಮೇಲೆ ಧ್ಯಾಸ' ಇರಿಸಿ 'ಚಿತ್ತವೃತ್ತಿ ನಿರೋಧ' ಮಾಡಿ ತನ್ನ 'ದಿವ್ಯಚಕ್ಷು' ಉತ್ತೇಜಿಸಿಕೊಂಡು ತನ್ನ ದಿವ್ಯಶರೀರವನ್ನು ಉತ್ತೇಜನ ಮಾಡಿಕೊಂಡು, ಸಕಲ ಸಿದ್ಧಿಗಳನ್ನು ಹೊಂದಿ ಮತ್ತೆ ಸಕಲ ಜ್ಞಾನವನ್ನು ಸಂಪಾದಿಸಿದ್ದಾನೆ.

## "ಮಾನಸಿಕ ಉಪವಾಸ"!

ನಲವತ್ತು ದಿವಸಗಳು ಜೀಸಸ್ ಧ್ಯಾನ ಸ್ಥಿತಿಯಲ್ಲಿದ್ದರು. ಆತ ಮಾಡಿದ್ದು ಶಾರೀರಕ ಉಪವಾಸವಲ್ಲ, "ಮಾನಸಿಕ ಉಪವಾಸ!" 'ಮನಸ್ಸು' ಎಂಬುದು ಆಲೋಚನೆಗಳ ಸಮೂಹ; ಆಲೋಚನೆಗಳು ಯಾವಾಗ ಇರುವುದಿಲ್ಲವೊ, ಅದೇ "ಮಾನಸಿಕ ಉಪವಾಸ"- ಅದೇ "ಧ್ಯಾನ"- ಅದೇ "ಮೆಡಿಟೇಷನ್". "ಧ್ಯಾನ" ಎಂಬ ಪದ ಜೀಸಸ್ ಉಪಯೋಗಿಸದಿದ್ದರೂ ಆ ಪದದ ಅರ್ಥ ವಿಶದೀಕರಿಸಿದ್ದಾರೆ. ಈ "ಮಾನಸಿಕ ಉಪವಾಸ"ವೆನ್ನುವುದೊಂದೇ ದೇವರ ರಾಜ್ಯದಲ್ಲಿ ಪ್ರವೇಶಿಸುವ ಮಾರ್ಗ! "ಪಿರಮಿಡ್ ಸ್ಪಿರಿಚ್ಯುವಲ್ ಸೊಸೈಟಿ" ರವರ ಮೂಲಸಿದ್ಧಾಂತವೇ ಧ್ಯಾನ. ಅದನ್ನೇ "Fasting of the mind" ಎನ್ನುತ್ತೇವೆ. ಅಲ್ಲಿಂದಲೇ ಎಲ್ಲಾ ಪ್ರಾರಂಭವಾಗುವುದು. ನಾವು ಎಂತಹ ಪರಿಸ್ಥಿತಿಗಳಲ್ಲಿ ಇದ್ದರೂ ಕೂಡ ಜಮೀನ್ದಾರನಾದರೂ ಸರಿ, ಎಷ್ಟು ಹೀನ ಪರಿಸ್ಥಿತಿಯಲ್ಲಿದ್ದರೂ ಸರಿ, ನಾವು ಮೊಟ್ಟಮೊದಲು ಹಿಡಿದಿಟ್ಟುಕೊಳ್ಳಬೇಕಾಗಿರುವುದು ನಮ್ಮ 'ಅಂತರ್‌ರಾಜ್ಯ'; 'ದಿವ್ಯರಾಜ್ಯ'; ಅದರಲ್ಲಿ ಪ್ರವೇಶಿಸಲಿಕ್ಕೆ ಮಾರ್ಗವೇ 'ಧ್ಯಾನ' ಅದೇ 'ಆನಾಪಾನಸತಿ'.

## "ದೇಹ ಬೇರೆ! ದೇಹಿ ಬೇರೆ!"

ಕೇವಲ 'ಆನಾಪಾನಸತಿ' ಎನ್ನುವುದರ ಮೂಲಕವೇ ಆಶಿಸಿದ ಚಿತ್ತವೃತ್ತಿನಿರೋಧ ನಡೆದು, ಅಂದರೆ, ಮಾನಸಿಕ ಉಪವಾಸ ಸಹಜವಾಗಿ ನಡೆದು ನಾವು ಆ ದೇವರ ರಾಜ್ಯದ ಭೂಮಿಕೆಯಲ್ಲಿ ಪ್ರವೇಶಿಸುತೇವೆ. 'ನಾವು' ಎಂದರೆ ನಮ್ಮ ಸೂಕ್ಷ್ಮ ಶರೀರ! ತಿಳಿದುಕೊಳ್ಳಬೇಕಾದ ಸತ್ಯವೇನೆಂದರೆ, "ಈ ದೇಹ ಬೇರೆ, ದೇಹಿ ಬೇರೆ!" ನಾವು ಆ 'ದೇಹಿ' ಅಷ್ಟೇ ಹೊರತು ಈ 'ದೇಹ'ವಲ್ಲ. ಈ 'ದೇಹಿ'ಎನ್ನುವುದು ದೇಹದಿಂದ ಬಿಡಬೇಕೆಂದರೆ, ದೇಹಕ್ಕೆ, ದೇಹಿಗೆ ಮಧ್ಯೆ ಇರುವ ಸಂಬಂಧ - ಅದೇ ಮನಸ್ಸು, ಆಲೋಚನೆಗಳ ಸಮೂಹ - ಅದು ನಿರ್ವೀರ್ಯವಾಗಬೇಕು. ಅದಕ್ಕೆ ಮಾರ್ಗ 'ಆನಾಪಾನಸತಿ'.

## "ಹನುಮಾನ್ ಚಾಲೀಸಾ"!

ಒಳ್ಳೆಯ ಬಿಸ್ಮಿಲ್ಲಾಖಾನ್ ಸಂಗೀತ ಕೇಳಿದ ನಂತರ ನಾವು ಕೂಡ ಸಂಗೀತ ಕಲಿತುಕೊಳ್ಳಬೇಕು, ಎಂದು ನಮ್ಮ ಆತ್ಮ ಚಡಪಡಿಸುತ್ತಿರುತ್ತದೆ. ಒಳ್ಳೆಯ ಫುಟ್‌ಬಾಲ್ ಆಟ ನೋಡಿದ ನಂತರ ನಾವು ಕೂಡ ಆ ರೀತಿ ಆಡಬೇಕು ಎಂದು ನಮ್ಮ ಆತ್ಮ, ನಮ್ಮ ಶರೀರ ಅಂದುಕೊಳ್ಳುತ್ತಿರುತ್ತದೆ. ಹಾಗೆಯೇ ಧ್ಯಾನದಲ್ಲಿ ಆ ಒಂದು ಸೂಕ್ಷ್ಮ ಶರೀರ ಅಂದುಕೊಳ್ಳುತ್ತಿರುತ್ತದೆ. ಹಾಗೆಯೇ ಧ್ಯಾನದಲ್ಲಿ ಆ ಒಂದು ಸೂಕ್ಷ್ಮ ಶರೀರ ಯಾನದ ಜೊತೆ, ದಿವ್ಯ ಚಕ್ಷುವಿನ ಜೊತೆ ಅನೇಕ ಸತ್ಯಗಳನ್ನು, ದಿವ್ಯಲೋಕಗಳನ್ನು ನೋಡಿದಾಗ, ಮತ್ತೆ ತಿರುಗಿ ಭೂಲೋಕಕ್ಕೆ ಬಂದಾಗ, ಇನ್ನು ಮುಂದೆ ಅದರೊಡನೆಯೇ ಜೀವಿಸಬೇಕೆಂದು, ಅದರೊಡನೆಯೇ ಪ್ರತಿಬಿಂಬಿಸಬೇಕೆಂದು, ಅನುಸರಿಸಬೇಕೆಂದು, ನಮ್ಮ ಜೀವನ ಪರಿತಪಿಸಿರುತ್ತದೆ. ಆದ್ದರಿಂದ, ಒಂದು ನಲವತ್ತು ದಿನಗಳು ನಮ್ಮ ಮನಸ್ಸನ್ನು ಧ್ಯಾನದ ಅಭ್ಯಾಸದಲ್ಲಿ ಬಲವಂತವಾಗಿಯಾದರೂ ಮಾಡಿಸಿದಲ್ಲಿ, ಇನ್ನು ಜೀವನವೆಲ್ಲ ಧ್ಯಾನಕ್ಕೆ, ಆ ಒಂದು ಸತ್ಯಕ್ಕೆ, ಆ ಒಂದು ಧ್ಯಾನ ಮನಸ್ಸು ತನ್ನನ್ನು ತಾನೇ ಅಂಕಿತ ಮಾಡಿಕೊಳ್ಳುತ್ತದೆ. ಆದರೆ, ಆ ನಲವತ್ತು ದಿವಸಗಳು ನಾವು ಎಷ್ಟೋ ಕಷ್ಟಪಡಬೇಕಾಗುತ್ತದೆ. ಈ ನಲವತ್ತು ದಿವಸಗಳ ಶ್ವಾಸದೀಕ್ಷೆ ಯನ್ನೇ ನಾವು ಹನುಮಾನ್ ಚಾಲೀಸಾ ಎಂದು ಕೂಡ ಕರೆಯುತ್ತೇವೆ. ಹನುಮಾನ್ ಎಂದರೆ ಶ್ವಾಸದ ಮೇಲೆ ಗಮನ, ಚಾಲೀಸಾ ಎಂದರೆ ನಲವತ್ತು ದಿವಸಗಳು.

### "ಕ್ರೈಸ್ಟ್ ಕಾನ್ಶಿಯಸ್‌ನೆಸ್"

ಕ್ರಿಶ್ಚಿಯಾನಿಟಿ ಅಂದರೆ ಚರ್ಚಿಗೆ ಹೋಗುವುದಲ್ಲ. 'ನಮ್ಮೊಳಗೆ ನಾವು ಹೋಗುವುದೆಂದರ್ಥ' - ಅದೇ ನಿಜವಾದ ಕ್ರಿಶ್ಚಿಯಾನಿಟಿ. ಯಾವಾಗ ನಮ್ಮೊಳಗೆ ನಾವು ಹೋಗುತ್ತೇವೋ, ನಮ್ಮಲ್ಲೂ ಕೂಡ ಆ ಕ್ರೈಸ್ಟ್ ಕಾನ್ಶಿಯಸ್‌ನೆಸ್ ಎನ್ನುವುದು ಬರುತ್ತದೆ. ಆ ಚೈತನ್ಯ ಬರುತ್ತದೆ. "ನಾನೇ ಎಲ್ಲ! ಎಲ್ಲಾ ನಾನೇ! ನಾನು ದೇವರ ಮಗ, ಎಲ್ಲರೂ ದೇವರ ಮಕ್ಕಳೇ, ಎಲ್ಲರೂ ಸರಿಸಮಾನರೇ!" ಎನ್ನುವುದು 'ಕ್ರೈಸ್ಟ್ ಕಾನ್ಶಿಯಸ್‌ನೆಸ್'! ಅದೇ 'ಬುದ್ಧ ಕಾನ್ಶಿಯಸ್‌ನೆಸ್'! ಅದು ನಮಗೆ ಬಂದಲ್ಲಿ ನಾವು ಕೂಡ ಚೆನ್ನಾಗಿ ಅದರಂತೆ ವಿಹರಿಸುತ್ತೇವೆ.

### "ಮೂರನೆ ಕಣ್ಣಿನಿಂದಲೇ ನಮ್ಮ ದೇವರ ರಾಜ್ಯದೊಳಗೆ ಪ್ರವೇಶಿಸುತ್ತೇವೆ"!

ಮತ್ತೆ ಜೀಸಸ್ ಏನು ಹೇಳಿದ್ದಾರೆಂದರೆ, "Unless thine two eyes become one, you cannot enter the Kingdom of god" ಅಂದರೆ, "ನಿಮ್ಮ ಎರಡೂ ಕಣ್ಣುಗಳು ಒಂದಾಗದಿದ್ದರೆ, ನೀವು ದೇವರ ರಾಜ್ಯದಲ್ಲಿ ಪ್ರವೇಶಿಸಲಾರಿರಿ". ಭೌತಿಕ ಶರೀರಕ್ಕೆ ಸಂಬಂಧಿಸಿದ ಈ ಎರಡು ಕಣ್ಣುಗಳು ರೂಪಾಂತರ ಹೊಂದಿ "ಒಂದು ಕಣ್ಣು" ಆಗಬೇಕು. ಅದೇ "ಮೂರನೇಕಣ್ಣು","ದಿವ್ಯಚಕ್ಷು, ಜ್ಞಾನಚಕ್ಷು". ಧ್ಯಾನದಲ್ಲಿ ಈ ಎರಡು ಕಣ್ಣುಗಳನ್ನು ಮುಚ್ಚಿಕೊಳ್ಳುತ್ತೇವೆ. ಧ್ಯಾನದಲ್ಲಿ ಈ ಎರಡು ಕಣ್ಣುಗಳಿಗೆ ಕೆಲಸವಿಲ್ಲ. ಈ ಎರಡು ಕಣ್ಣುಗಳಿಂದ ಯಾವಾಗ ಕೆಲಸವಿಲ್ಲವೋ, ಯಾವಾಗ ಹೀಗೆ ಕೆಲವು ಗಂಟೆಗಳು ಕುಳಿತುಕೊಳ್ಳುತ್ತೇವೋ ಆಗ ಆ ಶಕ್ತಿಯೆಲ್ಲ, ಆ ಎನರ್ಜಿ ಎಲ್ಲಾ ಆ ಮೂರನೇ ಕಣ್ಣಿನ ಮೂಲಕ ಹೊರಗೆ ಬಂದು ನಮ್ಮ ದಿವ್ಯದೃಷ್ಟಿ ಉತ್ತೇಜಿತವಾಗುತ್ತದೆ. ಆ ಮೂರನೇ ಕಣ್ಣಿನ ಮೂಲಕ ಹೊರಗೆ ಬಂದು ನಮ್ಮ "ದಿವ್ಯದೃಷ್ಟಿ" ಉತ್ತೇಜಿತವಾಗುತ್ತದೆ. ಆ ಮೂರನೆ ಕಣ್ಣೇ "ಏಕವಾದ ಕಣ್ಣು". ಅದೇ ಎಂಟ್ರಿ ಟಿಕೆಟ್! ಅದಿಲ್ಲದಿದ್ದರೆ ಒಳಗೆ ಪ್ರವೇಶವಿಲ್ಲ. ಅದನ್ನು ಸಂಪಾದಿಸಲು 'ಧ್ಯಾನ' ಮಾಡಬೇಕು.

### "ಎಸ್ಸೆನ್ಸ್ ಎನ್ನುವ ಯೋಗಿಗಳ ಯೋಗಿಯಿಂದ ಧ್ಯಾನ ಕಲಿತಿದ್ದೇನೆ"!

ಜೀಸಸ್ 'ಎಸ್ಸೆನ್ಸ್' ಎಂದು ಕರೆಯುವ, ಯೋಗಿಗಳ, ಯೋಗಿ ಕುಟುಂಬದವರ ಹತ್ತಿರ ಚಿಕ್ಕಂದಿನಲ್ಲೇ ಸೇರಿ ಯೋಗ ಪದ್ಧತಿಗಳನ್ನೆಲ್ಲ ಸ್ವೀಕರಿಸಿ, ಧ್ಯಾನ ಪದ್ಧತಿಗಳನ್ನೆಲ್ಲ ಕಲಿತುಕೊಂಡು, ಒಳ್ಳೆಯ ಯೋಗಿಯಾಗಿ, ಋಷಿಯಾಗಿ, ಒಳ್ಳೆಯ ಯೋಗೀಶ್ವರರಾಗಿ ನಂತರ ತನ್ನ ಅದ್ಭುತವಾದ ಬೋಧನೆಗಳನ್ನು ಪ್ರಪಂಚಕ್ಕೆ ಕೊಟ್ಟಿದ್ದಾರೆ.

ಪ್ರಪಂಚವನ್ನು ಸರಿಮಾಡುವಾತ, ಮೊಟ್ಟಮೊದಲು ತನ್ನನ್ನು ತಾನು ಸರಿಮಾಡಿಕೊಳ್ಳಬೇಕು. ಆದ್ದರಿಂದ, ಆತ ತನ್ನ ಚಿಕ್ಕಂದಿನಿಂದ ಧ್ಯಾನ ಸ್ಥಿತಿಯನ್ನು ಸಾಧಿಸಲು ಪ್ರಾರಂಭಿಸಿದರು.

### "ಜ್ಞಾನಿ ಬಾಲೋನ್ಮತ್ತವತ್!"

"Unless you become like a child, you cannot enter the Kingdom of God!" "ಒಂದು ಚಿಕ್ಕ ಮಕ್ಕಳ ತರಹ ಆಗದಿದ್ದರೆ, ಅಂದರೆ, ಆ ಮನಸ್ತತ್ವ ಇಲ್ಲದಿದ್ದರೆ, ನೀವು ದೇವರ ರಾಜ್ಯದಲ್ಲಿ ಪ್ರವೇಶಿಸಲಾರಿರಿ".

"ದೊಡ್ಡವರ" ಮನಸ್ತತ್ವ ಅಂದರೆ, ಕುತ್ಸಿತ ಬುದ್ಧಿ, ಸಂಕುಚಿತ ಮನಸ್ಸು ಆದಿದ್ದರೆ ದೇವರ ರಾಜ್ಯದಲ್ಲಿ ಯಾರು ಪ್ರವೇಶಿಸಲಾರರು. ಚಿಕ್ಕಮಕ್ಕಳ ಮನಸ್ಸು ಯಾವಾಗಲೂ ಸ್ವಚ್ಛವಾಗಿ, ಶೂನ್ಯವಾಗಿ ಇರುತ್ತದೆ. ತಾನು ಏನು ಅಂದುಕೊಳ್ಳುತ್ತದೋ ಅದನ್ನು ಹೇಳಿಬಿಡುತ್ತದೆ. ಹೇಳಿದ ನಂತರ ಅದನ್ನು ಮರೆತುಬಿಡುತ್ತದೆ. ಎಲ್ಲಾ ಮಕ್ಕಳು ದೇವರು! "ಬಾಲವಾಕ್ಕು ಬ್ರಹ್ಮವಾಕ್ಕು" ಅನ್ನುತ್ತಾರೆ. ಆದ್ದರಿಂದ, ಅಂತಹ 'ಬಾಲತತ್ವ' ಬರದಿದ್ದರೆ, ಆ 'ಬ್ರಹ್ಮತತ್ವ' ಎಷ್ಟೂ ಮಾತ್ರವೂ ಬರದು. ನಾವೆಲ್ಲರೂ ಎಷ್ಟೋ ದೊಡ್ಡವರಾಗಿಬಿಟ್ಟಿದ್ದೇವೆ, ಬೆಳೆದುಬಿಟ್ಟಿದ್ದೇವೆ! ಈ ಸಮಾಜ, ಈ ಚರ್ಮ ಚಕ್ಷುಗಳು ನಮಗೆ ಕೊಟ್ಟ ಸತ್ಯವನ್ನೇ ನಿಜವಾದ ಸತ್ಯವೆಂದುಕೊಂಡಿದ್ದೇವೆ. ಮತ್ತೆ ಆ ಬಾಲತ್ವ, ಅಮಾಯಕತೆ, ಸ್ವಚ್ಛತೆ ಬೆಳೆಸಿಕೊಳ್ಳದ ಹೊರತು ದೇವರ ರಾಜ್ಯವನ್ನು ಪ್ರವೇಶಿಸಲಾರಿರಿ.

**"ರಥ್ಯಾ ಚರ್ಪಟ ವಿರಚಿತ ಕಂಥಃ**
**ಪುಣ್ಯಾಪುಣ್ಯ ವಿವರ್ಜಿತ ಪಂಥಃ**
**ಯೋಗಿ ಯೋಗ ನಿಯೋಜಿತ ಚಿತ್ತೋ**
**ರಮತೆ ಬಾಲೋನ್ಮತ್ತವದೇವ!"**
**(ಭಜಗೋವಿಂದಂ)**

ಒಂದು 'ಯೋಗಿ' ಆಗಿರುವವನು 'ಮಕ್ಕಳಂತೆ', 'ಉನ್ಮತ್ತ'ನಾಗಿ ಯಾವಾಗಲೂ ರಮಿಸುತ್ತಿರುತ್ತಾನೆ. ಒಂದು ಮಗುವಿನಂತೆ ಆಗದಿದ್ದಲ್ಲಿ ದೇವರ ರಾಜ್ಯವನ್ನು ಪ್ರವೇಶಿಸಲಾರೆವು. ಆದಿ ಶಂಕರಾಚಾರ್ಯರು ಹೇಳಿದರೂ, ಶ್ರೀ ಜೀಸಸ್ ಹೇಳಿದರೂ, ಯಾರೇ ಹೇಳಿದರೂ ಸತ್ಯವೊಂದೇ.

ನಾವು ಎಷ್ಟೋ ವರ್ಷಗಳು ದೊಡ್ಡವರಾಗಿಬಿಟ್ಟಿದ್ದೇವೆ! ಮತ್ತೆ ನಾವು ಆ ಚಿಕ್ಕ ಮಗುವಿನ ಹಾಗೆ, ಐದು ವರ್ಷದ ಮಗುವಿನಂತೆ ಆ ಬಾಲತ್ವದೊಳಗೆ ಸೇರಬೇಕು. ಆಗಲೇ ಆತ್ಮರಾಜ್ಯದಲ್ಲಿ ಪ್ರವೇಶಿಸಬಲ್ಲೆವು. ಹುಟ್ಟಿದಾಗ ಎಲ್ಲರಿಗೂ ಆ ಮೇಲಿನ ಲೋಕದ ನೆನಪುಗಳು ಇರುತ್ತದೆ. ಆದರೆ, ಕ್ರಮೇಣ ಮರೆತುಹೋಗುತ್ತೇವೆ. ಮತ್ತೆ ಆ ಶೈಶವ ಸ್ಥಿತಿಗೆ ಸೇರಿಕೊಂಡರೆ, ಆ ನೆನಪುಗಳು ಬರುತ್ತವೆ. ಆ ನೆನಪುಗಳು ಬಂದಾಗಲೇ, ಗತಜನ್ಮಗಳು ನಮಗೆ ತಿಳಿದಾಗಲೇ, ಆ ಒಂದು ಮರೆತುಹೋದ ದಿವ್ಯ ಲೋಕಗಳು ಸ್ಮೃತಿಗೆ ಬಂದಾಗಲೇ, ಆ ಒಂದು ಸತ್ಯಗಳು, ಧರ್ಮಗಳು ಗೊತ್ತಾಗಿ, ಆ ಒಂದು ಪರಿಪೂರ್ಣ ಆತ್ಮಸತ್ಯ, ಪರಿಪಕ್ವ ಆತ್ಮ ಧರ್ಮದಲ್ಲಿ ನಾವು ಜೀವಿಸಬಲ್ಲೆವು. ಧ್ಯಾನದ ಮೂಲಕವೇ ಕಳೆದು ಹೋದ ಆ ಬಾಲ್ಯತತ್ವ ನಮಗೆ ಮತ್ತೆ ಬರುತ್ತದೆ. ಬೇರೆ ಮಾರ್ಗ ಯಾವುದಿದೆ? ಯಾವುದೂ ಇಲ್ಲ! ಆದ್ದರಿಂದಲೇ "ಯೋಗಿ ಯೋಗ ನಿಯೋಜಿತ ಚಿತ್ತಂರಮತೆ ಬಾಲೋನ್ಮತ್ತವದೇವ!" ಯೋಗಿಯಾದವನು ತನ್ನ ಯೋಗಸಾಧನೆಯಿಂದ ಚಿತ್ತವನ್ನು ನಿಯೋಜಿತ ಮಾಡಿಕೊಂಡಾಗ ಮತ್ತೆ ಶಿಶುತ್ವ ಹೊಂದುತ್ತಾನೆ.

### "ಪ್ರತಿ ಶಿಷ್ಯ ಕೂಡ ಗುರುವನ್ನು ಮೀರಿಸಿದ ಶಿಷ್ಯನಾಗಬೇಕು"

ಪಿರಮಿಡ್ ಮಾಸ್ಟರರೆಲ್ಲರೂ ಜೀಸಸ್‌ರವರ ಅಪರ ಶಿಷ್ಯರು! ನಾವೆಲ್ಲರೂ ಗುರುವಿನಂತವರಾಗಬೇಕು. ಗುರುವನ್ನು ಮೀರಿಸುವಂತವರಾಗಬೇಕು. ಆದ್ದರಿಂದಲೇ, "ನಾನೇನು ಸಾಧಿಸಿದ್ದೇನೋ ನನಗಿಂತ ನೀವು ಇನ್ನೂ ಹೆಚ್ಚು ಸಾಧಿಸಬಲ್ಲಿರಿ" ಎನ್ನುತ್ತಾರೆ ಜೀಸಸ್. ಪ್ರತಿ ಶಿಷ್ಯ ಕೂಡ ಗುರುವನ್ನು ಮೀರಿಸಿದ ಶಿಷ್ಯನಾಗಬೇಕು, ಎನ್ನುವುದೇ ಜೀಸಸ್‌ನ ಬೋಧನೆ! ಜೀಸಸ್‌ನ ಅನುಯಾಯಿಗಳೆಲ್ಲರೂ ಜೀಸಸ್‌ರನ್ನು ಮೀರಿಸಿದರೆ, ಆಗಲೇ ಜೀಸಸ್ ಸಂತೋಷಿಸುವುದು. ಪ್ರತಿ ತಂದೆ ತನ್ನ ಮಕ್ಕಳು ತನಗಿಂತ ಹೆಚ್ಚು ಒಳ್ಳೆಯವರಾಗಬೇಕೆಂದು ಬೇಡಿಕೊಳ್ಳುತ್ತಿರುತ್ತಾರೆ.

### "ಜೀಸಸ್‌ರ ಎರಡು ದಿವ್ಯ ಆದೇಶಗಳು"!

ಜೀಸಸ್ ಬಗ್ಗೆ ತಿಳಿದುಕೊಂಡಾಗಲೆಲ್ಲ ಆತನ "Two commandments" ಎರಡು ದಿವ್ಯ ಪ್ರಬೋಧೆಗಳು ನಮಗೆ ಯಾವಾಗಲೂ ನೆನಪಿಗೆ ಬರುತ್ತಿರುತ್ತವೆ. ಮೋಸಸ್‌ರವರ "Ten commandments" ಇದ್ದ ಹಾಗೆ, ಜೀಸಸ್‌ರವರ "Two commandments"- ಮೊದಲನೆಯದು: "Love thyself with all thy heart" ಎರಡನೆಯದು: "Love thy neighbour like thyself", ಅರ್ಥಾತ್ "ನಿಮ್ಮನ್ನು ನೀವು ಆ ಒಂದು ಪೂರ್ತಿ ಆತ್ಮದಿಂದ , ತುಂಬು ಹೃದಯದಿಂದ ಪ್ರೇಮಿಸಿಕೊಳ್ಳಿ" ನಂತರ, "ಪಕ್ಕದವರನ್ನು ಕೂಡ ಪ್ರೀತಿಸಿ" ಇದು ಎರಡು ಕಮಾಂಡ್ ಮೆಂಟ್.

### "ನಮ್ಮನ್ನು ನಾವು ಪ್ರೀತಿಸಿಕೊಳ್ಳಬೇಕು"!

ಇದೇ ಮೊದಲ ದಿವ್ಯಾದೇಶ. ಮೊದಲು ನಾವು, ಪಕ್ಕದವರನಲ್ಲ "ನಮ್ಮನ್ನು ನಾವು ಪ್ರೀತಿಸಿಕೊಳ್ಳುವುದು" ಎಂದರೆ ಇಲ್ಲಿ "ನಾವು" ನಮ್ಮನ್ನು ಅಂದರೆ 'ನಮ್ಮಶರೀರವಲ್ಲ' ನಾವೆಂದರೆ, ನಮ್ಮ 'ಆತ್ಮ'. ನಮ್ಮ ಆತ್ಮ ಕುರಿತು ನಾವು ತಿಳಿದುಕೊಳ್ಳುವುದು ಎಂದರೆ, ಆತ್ಮದಲ್ಲಿ ಪೂರ್ತಿಯಾಗಿ ಲೀನವಾಗಿ ಇರುವುದು ಎಂದರ್ಥ. ಧ್ಯಾನದಲ್ಲೇ ನಮ್ಮ ಆತ್ಮವನ್ನು ನಾವು ಆಲಂಗಿಸಿಕೊಳ್ಳುತ್ತೇವೆ, ನಮ್ಮ ಆತ್ಮಚುಂಬನ ಮಾಡಿಕೊಳ್ಳುತ್ತೇವೆ, ನಮ್ಮ ಆತ್ಮವನ್ನು ನಾವು ಅಪ್ಪಿಕೊಳ್ಳುತ್ತೇವೆ. ಧ್ಯಾನವೇ ಮೊಟ್ಟಮೊದಲ ದಿವ್ಯ ಆದೇಶ. ಧ್ಯಾನವೆನ್ನುವ ಪದ ಜೀಸಸ್ ಉಪಯೋಗಿಸಿಲ್ಲ, ಆದರೆ, ಹೇಳಿರುವುದೆಲ್ಲ ಧ್ಯಾನ ಕುರಿತೇ! ಆದರೆ, ಪ್ರಸ್ತುತವಿರುವ 'ಕ್ರಿಶ್ಚಿಯಾನಿಟಿ'ಯಲ್ಲಿ ಧ್ಯಾನವೆನ್ನುವುದು ಮೂಲೆಗುಂಪಾಗಿದೆ. "ಪಕ್ಕದವರನ್ನು ಪ್ರೀತಿಸುವುದೇ" ಜೀಸಸ್‌ರವರ ಸಿದ್ಧಾಂತವೆಂದುಕೊಂಡಿದ್ದಾರೆಯೇ ವಿನಹ, "ನಮ್ಮನ್ನು ನಾವು ಪ್ರೀತಿಸಿಕೊಳ್ಳಬೇಕು" ಎಂದು clause ಎಲ್ಲ ಎಗರಿಹೋಗಿದೆ.

### "ಪಕ್ಕದವರನ್ನು ಪ್ರೀತಿಸುವುದು"

ಈ ಮೇಲೆ ಹೇಳಿದ ರೀತಿ ನಮ್ಮನ್ನು ನಾವು ಯಾವ ವಿಧವಾಗಿ ಪ್ರೀತಿಸಿಕೊಳ್ಳುತ್ತೇವೋ ಹಾಗೆಯೇ, ಆ ಮೂರು ಅಂಶಗಳನ್ನು ಪಕ್ಕದವರಿಗೆ ತಲುಪಿಸುವುದೇ "ಪಕ್ಕದವರನ್ನು ಪ್ರೀತಿಸುವುದು" ಎನ್ನುವುದರ ಅರ್ಥ! ಅಷ್ಟೇ ಹೊರತು ಅನ್ನ ಆಹಾರ, ಬಟ್ಟೆಗಳನ್ನು ಕೊಡುವುದಲ್ಲ, ಜೀಸಸ್ ಹೇಳುತ್ತಾರೆ, "Man doesnot live by bread alone" –'ಮನುಷ್ಯ ರೊಟ್ಟಿಯೊಂದರಿಂದಲೇ ಜೀವಿಸಲಾರ' ಎಂದು. ಪಕ್ಕದವರನ್ನು ನಾವು ಧ್ಯಾನದ ಮೂಲಕ ಪ್ರೀತಿಸಬೇಕು. ನಮ್ಮ ಪ್ರೀತಿ ಅವರನ್ನು ಪುನರುಜ್ಜೀವನಗೊಳಿಸುತ್ತದೆ. ಎರಡಿವೆ 1) ನಮ್ಮ ಮೇಲೆ ಪ್ರೀತಿ. 2) ಪರರ ಮೇಲೆ ಪ್ರೀತಿ. ಆದ್ದರಿಂದ, ಪಕ್ಕದವರಿಗೆಲ್ಲ ಧ್ಯಾನ ಕಲಿಸಿರಿ. ಅವರಿಗೆ ಸ್ವಾಧ್ಯಾಯ ಕಲಿಸುವುದು, ಅವರಿಗೆಲ್ಲ ಸಜ್ಜನ ಸಾಂಗತ್ಯವನ್ನು ನೀಡುವುದು ಇದೇ "ಪಕ್ಕದವರನ್ನು ಪ್ರೀತಿಸುವುದು" ಎನ್ನುವುದು.

### "ಧ್ಯಾನ ಮಾಡುವುದೇ ನಮ್ಮ ಮೇಲೆ ನಾವು ತೋರುವ ಪ್ರೀತಿ"

ಪಿರಮಿಡ್ ಸ್ಪಿರಿಚ್ಯುವಲ್ ಸೊಸೈಟೀಸ್‌ಗೆ ಬಂದ ಪ್ರತಿಯೊಬ್ಬರೂ ಮೊಟ್ಟಮೊದಲು ತಾನು ಧ್ಯಾನ ಕಲಿತುಕೊಂಡು, ಎರಡನೇ ದಿನದಿಂದಲೇ ಎಲ್ಲರಿಗೂ ಧ್ಯಾನವನ್ನು ಕಲಿಸುತ್ತಾರೆ. ಧ್ಯಾನ ಕಲಿಸುವುದೇ ಇತರರ ಮೇಲೆ ತೋರುವ ಪ್ರೀತಿ, ವಿಶ್ವಾಸ, ಧ್ಯಾನ ಮಾಡುವುದೇ ನಮ್ಮ ಮೇಲೆ ನಮಗಿರುವ ಪ್ರೀತಿ. ಜೀಸಸ್‌ರವರು ಹೇಳಿರುವ ಪ್ರೀತಿ ಅಂದರೆ ಧ್ಯಾನವೇ ಎಂದು ತಿಳಿದುಕೊಳ್ಳೋಣ. "Meditation is love" "ಧ್ಯಾನವೇ ಪ್ರೀತಿ". ದೇಹ ಪೋಷಣೆ, ದೇಹದ ಬಗ್ಗೆಯೇ ಆಲೋಚನೆಗಳು ಇವೆಲ್ಲ ಪ್ರೀತಿಯಲ್ಲ, ಆತ್ಮವನ್ನು ಪೋಷಿಸಬೇಕು!

### "ನೆರೆಹೊರೆಯವರಿಗೆ ಧ್ಯಾನ ಕಲಿಸುವುದೇ ಪ್ರೀತಿ"

"ನೆರೆಹೊರೆಯವರನ್ನು ಪ್ರೀತಿಸಿ" ಎಂದಿದ್ದಾರೆ ಜೀಸಸ್, ಅವರು ಯಾರಾದರಾಗಲಿ, ಹಿಂದುವೋ, ಮುಸ್ಲಿಮೊ ಯಾವುದೇ ಜಾತಿಯವರಾಗಿರಲಿ, ಅವರನ್ನು ಪ್ರೀತಿಸಿ ಎಂದಿದ್ದಾರೆ. ಅಕ್ಕಪಕ್ಕದವರನ್ನು ಪ್ರೀತಿಸದೆ, ಎಲ್ಲೋ ಇರುವ ನಮ್ಮವರನ್ನು ಪ್ರೀತಿಸುತ್ತೇವೆ ನಾವು. ಎಲ್ಲೋ ಇರುವವರನ್ನು ಮರೆತುಬಿಡಬೇಕು. ನಮ್ಮ ಸುತ್ತಮುತ್ತ ಯಾರಿದ್ದಾರೋ, ದಿನನಿತ್ಯ ಯಾರನ್ನು ಸಂಧಿಸುತ್ತೇವೋ ಅವರನ್ನು ಪ್ರೀತಿಸಿರಿ. ಇವರಿಗೆಲ್ಲ ಧ್ಯಾನವನ್ನು ಕಲಿಸಬೇಕು. ಅವರು ಬಿಳಿಯರೇ, ಕರಿಯರೇ ಇವೆಲ್ಲ ಇಲ್ಲಿ ಅನವಶ್ಯ. ನಮ್ಮ ಜೊತೆ ಜೀವಿಸುತ್ತಿದ್ದಾರೆ ಅಷ್ಟೇ. ಅವರಿಗೆಲ್ಲ ಧ್ಯಾನ ಆತ್ಮಪದಾರ್ಥ ಕುರಿತು ಹೇಳಿಕೊಡಬೇಕು.

### "ಬಾಯಿಂದ ಏನು ಬರುತ್ತದೋ ಅದರ ಮೇಲೆ ಜಾಗ್ರತಿ"

ಜೀಸಸ್ ಹೇಳುತ್ತಾರೆ, "ನೀವು ದೇಹಪೋಷಣೆ ಬಗ್ಗೆ ಹೆಚ್ಚಾಗಿ ಆಲೋಚಿಸುತ್ತೀರಿ. ಇನ್ನು ಕಡಿಮೆಯಾಗಿ ಆಲೋಚಿಸಿ. ಆತ್ಮ ಪೋಷಣೆ ಕುರಿತು ಮಾತ್ರ ಹೆಚ್ಚಾಗಿ ಇನ್ನು ಆಲೋಚಿಸಿ". "what goes into the mouth that does not defileth a person, what comes out of the mouth that defileth a person". ನಮ್ಮ ದೇಹದೊಳಗೆ ಏನು ಹೋಗುತ್ತದೋ ಅದು ಎಂದೂ ಆತ್ಮಕ್ಕೆ ಕೆಟ್ಟದ್ದನ್ನು ಮಾಡದು, ಆದರೆ ನಮ್ಮ ಬಾಯಿಂದ ಏನು ಹೊರಗೆ ಬರುತ್ತದೋ ಅದು ಆತ್ಮವನ್ನು ಕೆಟ್ಟದ್ದು ಮಾಡಬಲ್ಲದು, ಇಲ್ಲವೇ ಒಳ್ಳೆಯದನ್ನು ಮಾಡಬಲ್ಲದು. ನಮ್ಮ 'ವಾಕ್‌ಕ್ಷೇತ್ರ'ದ ಮೇಲೆ ಒಳ್ಳೆಯ 'ಸಂಯಮ' ವಿರಬೇಕು. "ವಾಕ್‌ಕ್ಷೇತ್ರ" ದ ಬಗ್ಗೆ ದಿವ್ಯವಾಗಿ ಜೀಸಸ್ ಹೇಳಿದ್ದಾರೆ.

'ಸತ್ಯವಾಕ್ಯ'ಗಳನ್ನೇ ಯಾವಾಗಲೂ ಮಾತನಾಡಬೇಕು. ನಾವು ಈ ಆತ್ಮದ ಕುರಿತು, ಏನೂ ತಿಳಿಯದೆ, ಸಮಾಜ ಹೇಳಿದ ಹಾಗೆ ಮಾಡಿದರೆ, ನಮ್ಮ ಬಾಯಿಂದ ಅಸತ್ಯ ವಾಕ್ಕುಗಳು ಬರುತ್ತವೇ. ಆದರೆ,

"ದಿವ್ಯಧರ್ಮ"ವನ್ನು ದೃಷ್ಟಿಯಲ್ಲಿಟ್ಟುಕೊಂಡು ಮಾತನಾಡಿದರೆ, ನಮ್ಮ ಬಾಯಿಂದ ಎಂದೆಂದೂ 'ಸತ್ಯವಾಕ್ಕು'ಗಳೇ ಬರುತ್ತವೆ. ಆದ್ದರಿಂದ, ಸತ್ಯವಾಕ್ಕುಗಳನ್ನೇ ಮಾತನಾಡಬೇಕೆಂದಿದ್ದಾರೆ ಜೀಸಸ್.

ಒಂದು ಸಾರಿ ಜೀಸಸ್ ಹತ್ತು ವರ್ಷದವನಿದ್ದಾಗ, ಹಿರಿಯರ ಸಮ್ಮುಖದಲ್ಲಿ ಆತ್ಮದ ಕುರಿತು ಮಾತನಾಡುತ್ತಿರುತ್ತಾನೆ. ಆಗ ಒಬ್ಬ ಹುಡುಗ ಓಡುತ್ತಾ ಬಂದು, "ಜೀಸಸ್....ನಿನ್ನ ತಾಯಿ ಕರೆಯುತ್ತಿದ್ದಾರೆ" ಎನ್ನುತ್ತಾನೆ. ಆಗ ಜೀಸಸ್ ಹೇಳುತಾನೆ, "ಯಾರು ನನ್ನ ತಾಯಿ? ಯಾರು ನನ್ನ ತಂದೆ? ದೇವರ ರಾಜ್ಯದಲ್ಲಿರುವವರು ನನ್ನ ತಾಯಿ, ತಂದೆ" ಎಂಬ ಸತ್ಯವಾಕ್ಕುಗಳನ್ನೇ ಹೇಳುತ್ತಾನೆ. ಹಾಗೆ ಬಾಯಿಂದ ಯಾವ ಮಾತು ಬಂದರೂ ಕೂಡ ಅದು 'ಪೂರ್ಣ ಸತ್ಯ'ದಿಂದ, 'ಕಾಸ್ಮಿಕ್ ಸತ್ಯ', 'ಬ್ರಹ್ಮಾಂಡವಾದ ಆ ಸೃಷ್ಟಿ'ಯೊಡನೆ ಅನುಸಂಧಾನದಿಂದ ಕೂಡಿರಬೇಕು. ಹಾಗೆ ಕೂಡಿರದಿದ್ದರೆ, ಅವು ನಮ್ಮನ್ನು ತೊಂದರೆಗೀಡು ಮಾಡುತ್ತವೆ. ಕೆಟ್ಟದ್ದು ಮಾಡುತ್ತವೆ. "it defileth a person", ಆದ್ದರಿಂದ, ವಾಕ್‌ಕ್ಷೇತ್ರ ತುಂಬಾ ಮುಖ್ಯ. ಪಿರಮಿಡ್ ಸ್ಪಿರಿಚ್ಯುವಲ್ ಸೊಸೈಟಿ ಮಾಸ್ಟರರೆಲ್ಲರಿಗೂ ಇದರ ಬಗ್ಗೆ ಸವಿಸ್ತಾರವಾಗಿ ಹೇಳಲಾಗಿದೆ. ನಮ್ಮ ಬಾಯಿಂದ ಬರುವ ಮಾತುಗಳ ಬಗ್ಗೆ ಅತಿ ಎಚ್ಚರ ಅಗತ್ಯ.

## "ತ್ರಿಕರಣ ಶುದ್ಧಿಯಿಂದ ಕೂಡಿರಬೇಕು"

"ಯಾರು ಸ್ವಚ್ಛವಾಗಿರುತ್ತಾರೋ, ತ್ರಿಕರಣ ಶುದ್ಧಿಯಿಂದ ಇರುತ್ತಾರೋ, ಅವರದೇ ದೇವರ ರಾಜ್ಯ" ಎನ್ನುತ್ತಾರೆ ಜೀಸಸ್, "Blessed are they who are pure in heart, for they see the Kingdom of God" ಯಾರು ಮನಸಾ, ವಾಚಾ, ಕರ್ಮಣಾ ತ್ರಿಕರಣ ಶುದ್ಧಿಯಿಂದ ಇರುತ್ತಾರೋ ಅವರದೇ ದೇವರ ರಾಜ್ಯ. ಮನಸ್ಸಿನಲ್ಲಿ ಒಂದು, ಮಾತಿನಲ್ಲಿ ಮತ್ತೊಂದು, ಕಾರ್ಯತಃ ಮತ್ತೊಂದು ಮಾಡಿದರೆ, ತ್ರಿಕರಣ ಶುದ್ಧಿ ಇಲ್ಲದಂತೆ ತಾನೇ! ತ್ರಿಕರಣ ಶುದ್ಧಿಯಿಂದ ಕೂಡಿಕೊಂಡಿರಬೇಕು. ಇದನ್ನೇ ಸಿನ್ಸಿಯಾರಿಟಿ ಎನ್ನುವುದು ತ್ರಿಕರಣ ಶುದ್ಧಿ ಇಲ್ಲದವರಿಗೆ ದೇವರ ರಾಜ್ಯ ಇರಲಾರದು, ಅಸಂಭವ! ತ್ರಿಕರಣ ಶುದ್ಧಿಯನ್ನೇ ಜೀವನದಲ್ಲಿ ಪ್ರಪ್ರಥಮವಾಗಿ ಸಾಧಿಸಬೇಕು! ತರುವಾಯ ಧ್ಯಾನ! ತರುವಾಯ ಧ್ಯಾನ, ಜ್ಞಾನ, ಪ್ರಬೋಧೆ!

## "ನನ್ನ ದೇವರ ರಾಜ್ಯದಲ್ಲಿ ಎಷ್ಟೋ ಲೋಕಗಳಿವೆ"!

"In my father's kingdom there are many mansions", "ನನ್ನ ದೇವರ ರಾಜ್ಯದಲ್ಲಿ ಎಷ್ಟೋ ಲೋಕಗಳಿವೆ" ಎಂದು ಜೀಸಸ್ ಹೇಳಿದ್ದಾರೆ. ನಮಗೆ ಕಾಣಿಸುವ ಭೂಲೋಕವೊಂದೇ ಅಲ್ಲ ಇರುವದು! ಈ ಒಂದು ಬ್ರಹ್ಮಾಂಡದಲ್ಲಿ, ಸೃಷ್ಟಿಯಲ್ಲಿ ಕೋಟ್ಯಂತರ ಲೋಕಗಳಿವೆ. "Mansion" ಅಂದರೆ "ಲೋಕ" ಎಂದರ್ಥ ಮಾಡಿಕೊಳ್ಳಬೇಕು. "ಭೂಲೋಕ, ಭುವರ್ಲೋಕ,



ಸುವರ್ಲೋಕ, ಜನಾಲೋಕ, ಮಹಾಲೋಕ, ತಪೋಲೋಕ" ...ಇತ್ಯಾದಿ.

"ನಾನು, ನನ್ನ ತಂದೆ ಇಬ್ಬರೂ ಒಂದೇ!" ಜೀಸಸ್‌ರವರ ಬೋಧನೆಗಳಲ್ಲಿ ಎಲ್ಲಕ್ಕಿಂತ ಮುಖ್ಯವಾದುದು, "I and my father are one" "ನಾನು ದೇವರ ಮಗ" ಎಂದು ಹೇಳಿದ್ದಾರೆ, ತಕ್ಷಣವೇ "ನಾನು ನನ್ನ ತಂದೆ ಇಬ್ಬರೂ ಒಬ್ಬರೆ" ಎನ್ನುತ್ತಾರೆ. ನಾನು ಪೂರ್ಣಾತ್ಮ ಒಂದರ ಅಂಶಾತ್ಮ, ಆದರೆ, ಅಂಶಾತ್ಮನೇ ಪೂರ್ಣಾತ್ಮದಿಂದ ಬಂದ ಅಂಶಾತ್ಮ ಪೂರ್ಣಾತ್ಮವೇ! ಎರಡೂ ಬೇರೆ ಬೇರೆ ಅಲ್ಲ. ದ್ವೈತ, ಅದ್ವೈತ ಚೆನ್ನಾಗಿ ಸೇರಿಸಿ ಹೇಳಿದ್ದಾರೆ ಜಿಸಸ್. ದ್ವೈತವೆನ್ನುವುದು ಸತ್ಯವಾದರೆ, ಅದ್ವೈತವೂ ಸತ್ಯವೇ. "ನಾನು ಬೇರೆ, ನೀನೂ ಬೇರೆ" ಎನ್ನುವುದೂ ಸತ್ಯ. ಆದರೆ, "ನೀನು ನಾನು ಒಂದೇ" ಎನ್ನುವುದು ಇನ್ನೊ ದೊಡ್ಡ ಸತ್ಯ. "ನಾನು ಬೇರೆ ನನ್ನ ತಂದೆ ಬೇರೆ" ಎನ್ನುವುದು ಸತ್ಯ. ಆದರೆ, "ನಾನು ನನ್ನ ತಂದೆ ಇಬ್ಬರೂ ಒಂದೇ" ಎನ್ನುವುದು ಇನ್ನೂ ಒಳ್ಳೆಯ ಸತ್ಯ! ಎರಡು ಸತ್ಯಗಳೇ! ಪ್ರತಿ ಜೀವಿ, ಇನ್ನೊಂದು ಜೀವಿಗಿಂತ ಭಿನ್ನ ಮತ್ತು ಅಭಿನ್ನ ಕೂಡ! ಅಂಶಾತ್ಮ ಪೂರ್ಣಾತ್ಮಕ್ಕಿಂತ ಭಿನ್ನ ಆದರೆ, ತಕ್ಷಣವೇ ಅಭಿನ್ನ ಕೂಡ!

ಜೀವಾತ್ಮ ಜೀವಾತ್ಮಕ್ಕೆ ಏಕತ್ವ, ಜೀವಾತ್ಮ ಪರಮಾತ್ಮಕ್ಕೆ ಏಕತ್ವ! ಸರ್ವಾತ್ಮ ತತ್ವದಿಂದ ಪೂರ್ಣಾತ್ಮ, ಪೂರ್ಣಾತ್ಮದಿಂದ ಜೀವಾತ್ಮದ ಸೃಷ್ಟಿ, ಈ ಮೂರೂ Statements, ಮೂರು ಪ್ರಬೋಧೆಗಳು ಚಿಕ್ಕ ಚಿಕ್ಕ ವಾಕ್ಯಗಳಾದರೂ ಎಷ್ಟು ಅದ್ಭುತವಾಗಿ ಹೇಳಿದ್ದಾರೆ! "I am son of God, I and my father are one; I and you are one". ಇದನ್ನೇ ಕೆಲವರು ದ್ವೈತವೆಂದು, ಅದ್ವೈತವೆಂದು, ವಿಶಿಷ್ಟಾದ್ವೈತವೆಂದು ಕಿತ್ತಾಡಿಕೊಳ್ಳುತ್ತಿರುತ್ತಾರೆ, ಏನೂ ಅರ್ಥವಾಗದೆ. ಧ್ಯಾನವನ್ನೇ ಮಾಡುವುದಿಲ್ಲ, ಆದರೆ, ಎಲ್ಲಿ ಹುಟ್ಟಿದ್ದಾರೋ, ಯಾವ ಫಿಲಾಸಫಿಯಲ್ಲಿ ಹುಟ್ಟಿದ್ದಾರೋ, ಅದಕ್ಕೋಸ್ಕರ ಪ್ರಾಣವನ್ನು ಅರ್ಪಿಸುತ್ತಾರೆ - ಧ್ಯಾನ ಮಾಡದೆಯೇ!

## "ಮಾಂಸ ಪಿಂಡ, 'ಮಂತ್ರಪಿಂಡ' ಆಗಿಹೋಗುತ್ತದೆ!"

ಬಿರುಗಾಳಿ, ಬಿರುಗಾಳಿ ...ನಿಲ್ಲು ಎಂದ ತಕ್ಷಣ ನಿಂತುಹೋಯಿತು! ಯಾವಾಗ ನಾವು ಧ್ಯಾನ ಸ್ಥಿತಿಯಲ್ಲಿ ಪರಾಕಾಷ್ಠತೆ ಹೊಂದುತ್ತೇವೋ, ಆಗ ಪ್ರಕೃತಿಯೊಂದಿಗೆ ನಮಗೆ ಮಿತ್ರತ್ವ ಬರುತ್ತದೆ. ಜೀಸಸ್‌ಗೆ ಬಂದಿದೆ. ನಮಗೇತಕ್ಕೆ ಬರದು? ಶಂಕರಾಚಾರ್ಯರು ಕರಗಿಸಿದ ಸೀಸವನ್ನು ಕುಡಿದರು. ಅವರಿಗೇನೂ ಆಗಲಿಲ್ಲ, ಆದರೆ, ನಮಗೇಕೆ ಆಗುತ್ತದೆ? ಶ್ರೀ ಶಂಕರರಾಗಲಿ, ಶ್ರೀ ಜೀಸಸ್‌ರವರಾಗಲೀ, ಇವರೆಲ್ಲ ಧ್ಯಾನಯೋಗ ಸಿದ್ಧರುಗಳು. ಧ್ಯಾನಸಾಧನೆಯಲ್ಲಿ ಈ ಶರೀರ, ಈ ಭೌತಿಕ ಕಾಯ, ಈ ಮಾಂಸಪಿಂಡ 'ಮಂತ್ರಪಿಂಡ' ವಾಗಿ ಬಿಡುತ್ತದೆ. ಏನು ಬೇಕಾದರೂ ಮಾಡಬಹುದು, ತಿನ್ನಬಹುದು! ತಿನ್ನದೆಯೂ ಇರಬಹುದು!

## "ಎಂದೆಂದಿಗೂ ನಗುತ್ತಲೇ ಇರಬೇಕು"

ಜೀಸಸ್ ವೈನ್ ಕುಡಿದಿದ್ದಾರೆ. ಅಂದರೆ, ಸೆಲಬ್ರೇಷನ್‌ನಲ್ಲೇ ಇದ್ದಾರೆ ಎಂದರ್ಥ. "ಸರಿಯಾಗಿ ಕುಡಿದು, ತಿಂದು ಬದುಕಿ" ಎಂದಿದ್ದಾರೆ. ನಮ್ಮ ಜೀವನ ನಗುತ್ತಾ ಆಡುತ್ತಾ ಸಂತೋಷದಿಂದಿರುವುದಕ್ಕೇ ಇರುವುದು ಅಳುವುದಕ್ಕಲ್ಲ!

Celebrate!. ಯಾವ ವಿಧಿವಾಗಿ ಸೆಲಬ್ರೇಟ್ ಮಾಡುತ್ತೀರೋ ಅದೇ ವಿಧವಾಗಿ ಮಾಡಿಕೊಳ್ಳಿ. ಅಳುವುದಕ್ಕೆ ಕಾರಣ ಹುಡುಕಬೇಡಿ ಎಂದೂ ನಗುತ್ತಲೇ ಇರಬೇಕು. ಸಾಯುವಾಗಲೂ, ಶಿಲುಬೆಯಲ್ಲಿದ್ದಾಗಲು, ಜೀಸಸ್ ಹೇಳಿದ ಮಾತುಗಳು "Oh! Lord! These people donot know what they are doing! Please pardon them". ತಂದೆಯೇ! ಅವರೇನು ಮಾಡುತ್ತಿದ್ದಾರೆ ಎಂಬುದು ಅವರಿಗೆ ತಿಳಿಯದು, ಅವರನ್ನು ಕ್ಷಮಿಸು. ಆದರೆ, ನಾವು ಅವರು ಹೀಗೆ ಅಂದರು. ಅವರು ಹಾಗೆ ಅಂದರು ಎಂದು ಅದನ್ನೇ ಜಪಿಸುತ್ತಿರುತ್ತೇವೆ. ಯಾರಾದರೂ ಏನಾದರು ಅಂದಿದ್ದರೆ, ಅದು ಅವರು ಅಜ್ಞಾನದಿಂದ ಅಂದಿದ್ದಾರೆ ಎಂದು ಬಿಟ್ಟುಬಿಡಬೇಕೆ ಹೊರತು ಅದನ್ನು ನೆನಪಿಸಿಕೊಂಡು ಕುಗ್ಗುವುದು, ಅದು ಕ್ರಿಶ್ಚಿಯನ್ ಪದ್ಧತಿಯಲ್ಲ! ಪ್ರತೀಕಾರ ತೀರಿಸಿಕೊಳ್ಳುವುದು ಸರಿಯೇ ಅಲ್ಲ! ಅಂತವರ ಮೇಲೆ ಸಹಾನುಭೂತಿ ವ್ಯಕ್ತಪಡಿಸಬೇಕು. ಯಾರಾದರು ನಮ್ಮ ಮೇಲೆ ಅನ್ಯಾಯವಾಗಿ ವರ್ತಿಸುತ್ತಾರೋ ಅವರೊಡನೆ ಕರುಣೆ. ಸಹಾನುಭೂತಿಯಿಂದ ವ್ಯವಹರಿಸುವುದೇ ಕ್ರಿಶ್ಚಿಯಾನಿಟಿ.

### "ಬೈಬಲ್ ಪ್ರತಿಯೊಬ್ಬರೂ ಓದಬೇಕು!"

ಬೈಬಲ್ ಓದಿದರೆ ಜೀಸಸ್‌ರವರ ಬೋಧನೆಗಳು ದೊರಕುತ್ತವೆ. ಪ್ರತಿಯೊಬ್ಬರೂ ಮೊದಲು ತಮ್ಮ ಮೂಲ ಮತ ಗ್ರಂಥಗಳನ್ನು ಓದಬೇಕು. ಪಿರಮಿಡ್ ಮಾಸ್ಟರ್‌ಗಳೆಲ್ಲರೂ ಪ್ರತಿದಿನ ಭಗವದ್ಗೀತೆ ಓದಿದಂತೆ ಬೈಬಲನ್ನೂ ಓದಬೇಕು. New Testament ಓದಬೇಕು. ಸತ್ಯಗ್ರಂಥಗಳನ್ನು ಓದದಿದ್ದರೆ ನಮಗೇನು ಲಾಭ? ಈ ಓದುವುದನ್ನೇ ಸ್ವಾಧ್ಯಾಯವೆನ್ನುತ್ತೇವೆ. ಬೈಬಲ್ ಓದದಿದ್ದರೆ, ಜೀವನದಲ್ಲಿ ಅತಿ ಮುಖ್ಯವಾದ ಮಾಸ್ಟರನನ್ನು ಕಳೆದುಕೊಳ್ಳುತ್ತೇವೆ. ಕ್ರಿಶ್ಚಿಯನ್ನರೆಲ್ಲರೂ ಭಗವದ್ಗೀತೆ ಓದಬೇಕು. ಹಿಂದುಗಳೆಲ್ಲರೂ ಬೈಬಲ್ ಓದಬೇಕು.

### "ಪ್ರತಿ ಮಾನವನು ಕರುಣಾಮಯಿ ಆಗಬೇಕು"

ಜೀಸಸನ್ನು ನಾವು ಕರುಣಾಮಯಿ ಅನ್ನುತ್ತಿದ್ದೇವೆ. ಪ್ರತಿ ಮನುಷ್ಯನು ಕರುಣಾಮಯಿಯಾಗಬೇಕು. ಆಗಲೇ ಕ್ರಿಶ್ಚಿಯನ್ಸ್ ಅಂದರೆ! ಇಲ್ಲದಿದ್ದರೆ ಇಲ್ಲ! ಗೌತಮಬುದ್ಧನ ಜೀವನದಲ್ಲೂ ಎರಡು ಮಹತ್ವದ ವಿಷಯಗಳೆಂದರೆ, ಒಂದು ಪ್ರಜ್ಞೆ ಮತ್ತೊಂದು ಕರುಣೆ ಜೀಸಸ್‌ರ ಜೀವನದಲ್ಲೂ ಈ ಎರಡು ಮುಖ್ಯವಾದವುಗಳು. ಜೀಸಸ್ ಮಹಾಪ್ರಜ್ಞಾವಂತ, ಮಹಾಕರುಣಾಮಯಿ.

ಪ್ರಜ್ಞೆ ಇಲ್ಲದವರು ಎಂದಿಗೂ ಕರುಣೆ ತೋರಿಸರು. ಅದು ಅಸಂಭವ. ಧ್ಯಾನ ಮಾಡುವುದರ ಮೂಲಕವೇ ಸತ್ಯ ತಿಳಿಯುವುದು. ಸತ್ಯ ಅನುಭವವಾದಾಗಲೇ 'ಪ್ರಜ್ಞೆ' ಎನಿಸಿಕೊಳ್ಳುತ್ತದೆ. "ಪ್ರಜ್ಞಾನಂ ಬ್ರಹ್ಮ" ಅಂದರೆ "ನಾವೇ ಎಲ್ಲ" ಎಂದು ತಿಳಿದುಕೊಳ್ಳುವ ಆ ವಿಶೇಷವೇ, ಪ್ರಜ್ಞಾನವೇ "ಬ್ರಹ್ಮಜ್ಞಾನ!" ಅಲ್ಲಿಂದ ಕರುಣೆ ಎಲ್ಲಿ ಬರುತ್ತದೆ? "ನೀನು ಬೇರೆ, ನಾನು ಬೇರೆ" ಎಂದು ತಿಳಿದಾಗ ಕರುಣೆ ಎಲ್ಲಿ ಇರುತ್ತದೆ? "ನೀನು ನಾನು ಒಂದೇ" ಎಂದು ತಿಳಿದುಕೊಂಡ ಆ ಸ್ಥಿತಿಯಿಂದಲೇ, 'ಪ್ರಜ್ಞಾನ', ಆ 'ಬ್ರಹ್ಮಜ್ಞಾನ'ದಿಂದಲೇ ಆ 'ಬ್ರಹ್ಮತ್ವ'ದಿಂದಲೇ, ಆ 'ಬ್ರಾಹ್ಮತತ್ವ'ದಿಂದ... ಕರುಣೆ ಆರಂಭವಾಗುತ್ತದೆ. ಅಲ್ಲಿಂದ ನಾವು ಸಹಜವಾಗಿ ಕರುಣಾಮಯಿಗಳಾಗುತ್ತೇವೆ.



### "ಮೊದಲು ಆತ್ಮಕ್ಕೆ ಮೋಕ್ಷ ನಂತರ, ಜಗತ್ ಹಿತ!"

"ಶ್ರೀ ರಾಮಕೃಷ್ಣ ಮಿಷನ್" ಅವರ ಆದರ್ಶ ಕೂಡಾ ಅದೇ! ಶ್ರೀ ರಾಮಕೃಷ್ಣ ಪರಮಹಂಸ, ಶ್ರೀ ವಿವೇಕಾನಂದ ಇವರ ಸಂದೇಶವೇನೆಂದರೆ, "ಆತ್ಮನೋ ಮೋಕ್ಷಾರ್ಥಂ ಜಗತ್ ಹಿತಾಯ ಚ" ಮೊದಲು 'ಆತ್ಮ'ಕ್ಕೆ ಮೋಕ್ಷ, ನಂತರ, ಜಗತ್‌ಹಿತ, ಆತ್ಮಕ್ಕೆ ಮೋಕ್ಷವಿಲ್ಲದಿದ್ದರೆ ಜಗತ್‌ಹಿತ ಹೇಗೆ ಸಂಭವ? ಆತ್ಮಕ್ಕೆ ಮೋಕ್ಷ ಎಂದರೆ ತನ್ನಲ್ಲಿ ತನಗೆ ಪ್ರೀತಿ. ಆತ್ಮದ ಮೋಕ್ಷವೇ Kingdom of God ಒಳಗೆ ಪ್ರವೇಶಿಸುವುದು ಎಂದರ್ಥ. ನಂತರ 'ಜಗತ್‌ಹಿತ'. ಅಂದರೆ, ನಮಗೆ ಹೇಗೆ ಹಿತ ಸಿಕ್ಕಿದೆಯೋ, ಆ ದಾರಿಯಲ್ಲೇ ನಮ್ಮ ಅಕ್ಕಪಕ್ಕದವರಿಗೆಲ್ಲ ಆಗಾಗ್ಗೆ ಅದೇ ಮಾರ್ಗವನ್ನು ತೋರಿಸುತ್ತಿರುವುದು, ಹೇಳುತ್ತಿರುವುದು, ಬೋಧಿಸುತ್ತಿರುವುದು .... "ಕರುಣೆ".

### "ಕರುಣೆ ಅನೇಕ ಸ್ತರಗಳಲ್ಲಿರುತ್ತವೆ!"

ರೊಟ್ಟಿ ಬೇಕಾದವರಿಗೆ ರೊಟ್ಟಿ ಕೊಡುತ್ತಿರಬೇಕು. ಆತ್ಮಜ್ಞಾನ ಬೇಕಾದವರಿಗೆ ಆತ್ಮಜ್ಞಾನ ನೀಡುತ್ತಿರಬೇಕು. ಆತ್ಮಜ್ಞಾನ ಬೇಕಾದವರಿಗೆ ರೊಟ್ಟಿ ಕೊಟ್ಟರೆ ಏನೂ ಲಾಭವಿಲ್ಲ, ಆತ್ಮಜ್ಞಾನ ಬೇಕಾದವರಿಗೆ ಅದನ್ನೇ ನೀಡಬೇಕು. ದೀನರು..... "ಕೇವಲ ದೇಹವೇ ತಾನು" ಎಂದು ಅವರು ಅವರು ಅಂದುಕೊಳ್ಳುತ್ತಿರುವಾಗ ರೊಟ್ಟಿ ತಪ್ಪದೆ ಕೊಡಬೇಕು. ತರುವಾಯ ಅವರನ್ನು ಆತ್ಮಜ್ಞಾನಿಗಳಾಗಿ ತಯಾರು ಮಾಡುವುದಕ್ಕಾಗಿ ಅತ್ಯಧಿಕವಾಗಿ ಪ್ರಯತ್ನಿಸುವುದೇ 'ಕರುಣೆ', 'ಕರುಣೆ' ಅನೇಕ ಸ್ತರಗಳಲ್ಲಿರುತ್ತವೆ. ಭೌತಿಕ ಸ್ತರದಲ್ಲಿ 'ಕರುಣೆ', ಬುದ್ಧಿ ಸ್ತರದಲ್ಲಿ 'ಕರುಣೆ' ಮತ್ತೆ ಆತ್ಮಸ್ತರದಲ್ಲಿ 'ಕರುಣೆ'! ಚೆನ್ನಾಗಿ ಇಂಗ್ಲಿಷು, ಸಂಗೀತ ಹಾಗೂ ಓದುವುದನ್ನು ಕಲಿಸುವುದು ಇವೆಲ್ಲ ಬುದ್ಧಿಸ್ತರದಲ್ಲಿ 'ಕರುಣೆ' ಆತ್ಮಜ್ಞಾನ ಕಲಿಸುವುದು ಆಧ್ಯಾತ್ಮಿಕ ಸ್ತರದಲ್ಲಿ ಕರುಣೆ ಹಸಿವಾದಾಗ ಆಹಾರ ನೀಡುವುದು ಭೌತಿಕ ಸ್ತರದಲ್ಲಿ 'ಕರುಣೆ'. ಎಲ್ಲ ಸ್ತರದಲ್ಲೂ 'ಕರುಣಾಮಯಿ'ಯಾಗಿ ಇರುವುದೇ ಜೀಸಸ್‌ರವರ ವಿಶಿಷ್ಟತೆ!

### "ಪ್ರತಿಯೊಬ್ಬನೂ ಜೀಸಸ್ ಕ್ರೈಸ್ಟ್ ಆಗಬೇಕು"

ಜೀಸಸ್ ಧ್ಯಾನ ಮಾಡಬೇಕೆಂದು ಹೇಳಿದ್ದಾನೆ. ಆತನ ಬೋಧನೆಗಳನ್ನು ಸ್ವಾಧ್ಯಾಯ ಮಾಡಬೇಕು. ಮನನ ಮಾಡಬೇಕು. ಸ್ಮರಣೆ ಮಾಡಬೇಕು. ನಿಧಿಧ್ಯಾಸನ ಮಾಡಬೇಕು. ಸಾಕ್ಷಾತ್ಕಾರ ಹೊಂದಬೇಕು.

# ಈಜಿಪ್ಟ್ ಧ್ಯಾನಯಾತ್ರೆ

ಈಜಿಪ್ಟ್ ಯಾತ್ರೆಯನ್ನು ಅಕ್ಟೋಬರ್ 29ರಿಂದ ನವೆಂಬರ್ 7 ವರೆಗೆ ಹಮ್ಮಿಕೊಳ್ಳಲಾಗಿತ್ತು. ಅಕ್ಟೋಬರ್ 28 ರಾತ್ರಿ 10.30ಗೆ ಹೈದರಾಬಾದಿನ "ಸ್ಪಿರಿಚ್ಯುವಲ್ ಇಂಡಿಯಾ" ಆಫೀಸ್‌ನಲ್ಲಿ ಪತ್ರಿಸರ್ ಅವರನ್ನು ಭೇಟಿ ಮಾಡಿದೆವು. ಪತ್ರಿಸರ್ ಎಲ್ಲರಿಗೂ ಶುಭವನ್ನು ಹಾರೈಸಿದರು ಮತ್ತು ಪ್ರತಿಯೊಬ್ಬ ಪಿರಮಿಡ್ ಮಾಸ್ಟರ್ ಈಜಿಪ್ಟ್‌ನ ಗೀಜಾ ಪಿರಮಿಡ್‌ಗೆ ಹೋಗಬೇಕೆಂದು ಸಂದೇಶ ನೀಡಿದರು. ಪತ್ರಿಸರ್ ಅವರ ಆಶೀರ್ವಾದಗಳೊಂದಿಗೆ ನಮ್ಮ ಈಜಿಪ್ಟ್ ಪ್ರಯಾಣ ಪ್ರಾರಂಭವಾಯಿತು. ನಾವು ಒಟ್ಟು 23 ಧ್ಯಾನಿಗಳು, 4 ಬೆಂಗಳೂರು ಪೈಮ ಮಾಸ್ಟರ್ಸ್, 2 ಸೂರತ್ ಮಾಸ್ಟರ್ಸ್ ಮತ್ತು ಉಳಿದವರೆಲ್ಲ ಆಂಧ್ರ ಮಾಸ್ಟರ್‌ಗಳು. 16 ವಯಸ್ಸಿನಿಂದ 60 ವಯಸ್ಸಿನವರು ಇದ್ದರು, ವಯಸ್ಸಿನ ಭಾವನೆ ಇಲ್ಲದೆ ಎಲ್ಲರೂ ಒಂದೇ ಎನ್ನುವ ಭಾವನೆ ಇದ್ದುದ್ದರಿಂದ ನಮ್ಮ ಈಜಿಪ್ಟ್ ಯಾತ್ರೆ ಅದ್ಭುತವಾಗಿ, ಸುಗಮವಾಗಿ ಸಾಗಿತು.

**ಅಕ್ಟೋಬರ್ 29:** ನಮ್ಮ ಪಯಣ ಆರಂಭವಾಯಿತು. ದುಬೈ ಸೇರಿದೆವು. ನಮ್ಮ ಲುಧಿಯಾನಾ ಪಿರಮಿಡ್ ಮಾಸ್ಟರ್ ರಚನ ಅವರ ಮನೆಗೆ ದುಬೈನಲ್ಲಿ Palm Jumeraಗೆ ಹೋದೆವು. ಸಂತೋಷದಿಂದ ಪ್ರೀತಿಯಿಂದ ಸ್ವಾಗತಿಸಿದರು. ದುಬೈ ಸಿಟಿ ನೋಡಿದೆವು. ಭೋಜನದ ನಂತರ ರಾತ್ರಿ ಲಕ್ಸರ್‌ಗೆ ನಮ್ಮ ಪಯಣ ಮುಂದುವರಿಯಿತು.

**ಅಟ್ಟೋಬರ್ 30:** ಲಕ್ಸರ್ ಸೇರಿದೆವು. ಹೋಟಲ್ ಲೋಟಸ್‌ನಲ್ಲಿ ಉಳಿದುಕೊಂಡೆವು. ಮಧ್ಯಾಹ್ನ ಭೋಜನದ ನಂತರ, ಪಾಪುರಸ್ ಮ್ಯೂಜಿಯಮ್‌ಗೆ ಹೋದೆವು. ಪಾಪುರಸ್ ಅನ್ನುವುದು ಒಂದು ಗಿಡ, ಅದರಿಂದ ಪೇಪರ್ ತಯಾರಿ ಮಾಡಿದರು. ಅದರ ಮೇಲೆ ವಿವಿಧ ಚಿತ್ರಗಳನ್ನು ಪೇಂಟ್ ಮಾಡಿದರು. ಪಾಪುರಸ್ ಗಿಡದಿಂದ ಪೇಪರ್ ತಯಾರಿ ಮಾಡುವುದು ಅಲ್ಲಿಯೇ ತೋರಿಸಿದರು.

**ಅಟ್ಟೋಬರ್ 31:** ಬೆಳಗ್ಗೆ ಕರ್ನಾಕ್ ದೇವಾಲಯಕ್ಕೆ ಹೋದೆವು. ನಮ್ಮ ಗೈಡ್ ಮಹಮುದ್ ಎಲ್ಲವನ್ನು ವಿವರವಾಗಿ ತಿಳಿಸುತ್ತಿದ್ದರು. ಎಲ್ಲಾ ದೇವಾಲಯಗಳ ಗೋಡೆಗಳ ಮೇಲೆ ಅಲ್ಲಿನ ಪ್ರಾಚೀನ ರಾಜ, ರಾಣಿ, ದೇವ, ದೇವತೆಗಳ ಚಿತ್ರಗಳನ್ನು ನೋಡಬಹುದು. ಅವರು ಬಳಸುತ್ತಿದಂತಹ ವಸ್ತುಗಳನ್ನು ಎಲ್ಲವನ್ನೂ ಚಿತ್ರಗಳ ರೂಪದಲ್ಲಿ ನೋಡಬಹುದು. ಕರ್ನಾಕ್ ದೇವಾಲಯ ಪ್ರಪಂಚದಲ್ಲಿ ಅತಿ ದೊಡ್ಡ ದೇವಾಲಯ. ನಂತರ ನೈಲ್ ಕ್ರೂಜ್‌ಗೆ ಹೋದೆವು. ಕ್ರೂಜ್ ತುಂಬ ಚೆನ್ನಾಗಿತ್ತು. ಮನೆಯ ವಾತಾವರಣದಲ್ಲಿ ಇರುವ ಭಾವನೆ ಮೂಡಿತು. ಸಂಜೆ ಲಕ್ಸರ್ ದೇವಾಲಯಕ್ಕೆ ಹೋದೆವು.

**ನವೆಂಬರ್ 1:** ಬೆಳಗ್ಗೆ ವ್ಯಾಲಿ ಆಫ್ ಕಿಂಗ್ಸ್, ಕ್ವೀನ್ ಹಾಚೆಪ್‌ಸೆಟ್‌ಗೆ ಹೋದೆವು. ವ್ಯಾಲಿ ಆಫ್ ಕಿಂಗ್ಸ್ ಎನ್ನುವುದು ರಾಜರ ಮೃತ ದೇಹಗಳನ್ನು ಮಮ್ಮಿ ಗಳನ್ನಾಗಿಸಿ ಇರಿಸುವ ಸ್ಥಳ. ಕಾರಣವೇನೆಂದರೆ, ಅವರಿಗೆ ಪುನರ್‌ಜನ್ಮದಲ್ಲಿ ನಂಬಿಕೆ ಇತ್ತು. ಸಂಜೆ ಕ್ರೂಜ್‌ನಲ್ಲಿ ನಮ್ಮ 23 ಧ್ಯಾನಿಗಳ ಪರಿಚಯ ಮತ್ತು ಎಲ್ಲರ ಧ್ಯಾನಾನುಭವಗಳನ್ನು ಹಂಚಿಕೊಂಡೆವು. ರಾತ್ರಿ ಕ್ರೂಜ್ ಇಸ್ನಾಗೆ ಹೊರಟಿತ್ತು.

**ನವೆಂಬರ್ 2:** ಕ್ರೂಜ್ ಇಡ್ಫು ಕಡೆ ಹೊರಟಿತ್ತು. ಇಡ್ಫು ದೇವಾಲಯಕ್ಕೆ ಹೋದೆವು. ಈ ದೇವಾಲಯವು ಪರಿಪೂರ್ಣವಾಗಿದ್ದು, ಉತ್ತಮವಾಗಿ ಸಂರಕ್ಷಿಸಲ್ಪಟ್ಟಿದೆ. ರಾತ್ರಿ ಕ್ರೂಜ್ ಕೊಮಾಂಬೊ ಕಡೆ ಹೊರಟಿತ್ತು. ರಾತ್ರಿ ಅಲ್ಲೆ ಉಳಿದೆವು.

**ನವೆಂಬರ್ 3:** ಕೊಮಾಂಬೊ ದೇವಾಲಯಕ್ಕೆ ಹೋದೆವು. ಇದು ತುಂಬಾ ಚೆನ್ನಾಗಿತ್ತು. ಈ ದೇವಾಲಯವು ನೈಲ್ ನದಿಯ ಪೂರ್ವದಂಡೆಯ ಮೇಲಿದೆ. ಅಲ್ಲಿಂದ ಆಸ್ವಾನ್‌ನಲ್ಲಿ ತುಂಬ ದೊಡ್ಡ ಡ್ಯಾಮ್ ಮತ್ತು ಫಿಲೇಯ್ ದೇವಾಲಯ ನೋಡಿದೆವು.

**ನವೆಂಬರ್ 4:** ಮುಂಜಾನೆ 3 ಗಂಟೆಗೆ ಅಬುಸಿಂಬೆಲ್‌ಗೆ ಪ್ರಯಾಣ ಮಾಡಿದೆವು. ಇದು ತುಂಬಾ ದೊಡ್ಡ ಕಟ್ಟಡ. ಅಬುಸಿಂಬೆಲ್ ಎಂಬುದು, ಈಜಿಪ್ಟ್‌ನ ಗಡಿಯ ಬಳಿಯಲ್ಲಿ ನಿರ್ಮಿಸಲಾಗಿರುವ ಎರಡು ದೇವಾಲಯಗಳ ಒಂದು ಸಮೂಹ ವಾಗಿದೆ. ಸಂಜೆ ಅಲ್ಲಿಯ ಪ್ರಾಚೀನವಾದ ನೆಬುಲಿಯನ್ ಹಳ್ಳಿಗೆ ಹೋದೆವು. ಅಲ್ಲಿನ ಜನರು ಮತ್ತು ಸಂಸ್ಕೃತಿ ತುಂಬ ಪ್ರಾಚೀನ ಕಾಲದ್ದು. ಹಳ್ಳಿಯ ವಾತಾವರಣ ತುಂಬ ಅದ್ಭುತವಾಗಿತ್ತು. ಅಲ್ಲಿಂದ ಕ್ರೂಜ್‌ಗೆ ಬಂದೆವು. ಕ್ರೂಜ್‌ನಿಂದ ಕೈರೊಗೆ ರೈಲ್ ಮುಖಾಂತರ ಹೋದೆವು.

**ನವೆಂಬರ್ 5:** ಬೆಳಗ್ಗೆ ಕೈರೊಗೆ ತಲುಪಿದೆವು. ಸಂಜೆ ಪಿರಮಿಡ್ಸ್ ಮುಂದೆ ಸೌಂಡ್ ಮತ್ತು ಲೈಟ್ ಷೋಗೆ ಹೋದೆವು. ಪ್ರಾಚೀನ ಕಾಲದ ರಾಜ, ರಾಣಿಯರ, ದೇವರುಗಳ ಐತಿಹಾಸಿಕ ವಿವರಗಳು ಮತ್ತು 3 ಪಿರಮಿಡ್‌ಗಳ ವಿವರಣೆಯನ್ನು ಸೌಂಡ್ ಮತ್ತು ಲೈಟ್ ಷೋ ಮುಖಾಂತರ ಅದ್ಭುತವಾಗಿ ವಿವರಿಸಿದರು.

**ನವೆಂಬರ್ 6:** ಬೆಳಗ್ಗೆ ಈಜಿಪ್ಷಿಯನ್ ಮ್ಯುಜಿಯಮ್‌ಗೆ ಹೋದೆವು.



ಅದು ತುಂಬಾ ದೊಡ್ಡದಾಗಿತ್ತು. ರಾಜ ರಾಣಿಯರ ಮಮ್ಮಿಗಳ ಕೋಣೆ, ಪ್ರಾಣಿಗಳ ಮಮ್ಮಿಗಳ ಕೋಣೆ, ರಾಜ ರಾಣಿಯರ ಉಪಯೋಗಿಸುತ್ತಿದ್ದಂತಹ ಆಭರಣಗಳು, ವಸ್ತ್ರಗಳು, ಮಮ್ಮಿಫಿಕೇಷನ್‌ಗೆ ಬಳಸುತ್ತಿದ್ದಂತಹ ವಸ್ತ್ರಗಳು ಮುಂತಾದುವುಗಳನ್ನು ನೋಡಿದೆವು. ಊಟದ ನಂತರ, ನಮ್ಮ ಈಜಿಪ್ಟ್ ಪ್ರಯಾಣದ ಮುಖ್ಯವಾದ ಗುರಿ ಗೀಜಾ ಪಿರಮಿಡ್ಡನ್ನು ತಲುಪಿದೆವು. ಎಲ್ಲರೂ ಕಾತುರದಿಂದ ಎದುರು ನೋಡುತ್ತಿದ್ದ ಪಿರಮಿಡ್‌ನಲ್ಲಿ ಧ್ಯಾನ ಮಾಡುವ ದಿನ ಬಂದಿತು. ಗೀಜ ಕಾಂಪ್ಲೆಕ್ಸ್‌ನಲ್ಲಿ ಮೂರು ಮುಖ್ಯವಾದ ಪಿರಮಿಡ್‌ಗಳು ಇವೆ. ಪಿರಮಿಡ್ ವಾತಾವರಣಕ್ಕೆ ಹೋದ ಕೂಡಲೇ ತುಂಬ ಆಶ್ಚರ್ಯಯಾದ ಸಂಗತಿ ನಡೆಯಿತು. ಎಲ್ಲರೂ silent, thoughtless, empty mind ಅನುಭವವನ್ನು ಸರಳವಾಗಿಯೇ ಪಡೆದರು. ಅಲ್ಲಿನ energies ತುಂಬ ಹೆಚ್ಚು ಆಗಿತ್ತು, ಪಿರಮಿಡ್ ಹೋಗುವ ಮೊದಲೇ ಧ್ಯಾನದ ಸ್ಥಿತಿ ತಲುಪಿದೆವು. ಆಶ್ಚರ್ಯಯಾಯಿತು. ಧ್ಯಾನ ಮಾಡಬೇಕಾದ ಪಿರಮಿಡ್ ಸುತ್ತಲು ಒಂದು ಪ್ರದಕ್ಷಿಣೆ ಹಾಕಿ ಪಿರಮಿಡ್‌ಗೆ ಹೋದೆವು. ತುಂಬ ಅದ್ಭುತವಾಗಿತ್ತು, adventurous ಆಗಿತ್ತು. ರಾಘವರಾವ್ ಸರ್‌ರವರ ನೇತೃತ್ವದಲ್ಲಿ ಎಲ್ಲರೂ ಧ್ಯಾನದಲ್ಲಿ ಕುಳಿತೆವು. ಎಲ್ಲರೂ ಅದ್ಭುತವಾಗಿ ನಮ್ಮ ಪತ್ರಿಸರ್ ಪ್ರತ್ಯಕ್ಷವನ್ನು ಧ್ಯಾನದ ಮುಖಾಂತರ ಗಮನಿಸಿದೆವು. ಪ್ರತಿಯೊಬ್ಬರಿಗೂ ಬೇರೆ ಬೇರೆಯಾದ ಅನುಭವಗಳಾದವು. ನಮ್ಮ ಧ್ಯಾನದ ಕಾರ್ಯಕ್ರಮ ಈಜಿಪ್ಟ್ ಯಾತ್ರೆಯ ಪ್ರಾರಂಭದಿಂದಲೂ ಪ್ರತಿ ನಿಮಿಷ, ಪ್ರತಿ ಕ್ಷಣ ನಮ್ಮ ಜೊತೆಯಲ್ಲಿದ್ದ ಪತ್ರಿಸರ್‌ರವರನ್ನು ಎಲ್ಲರೂ ಗಮನಿಸಿದರು. ಸಂಜೆ ಷಾಪಿಂಗ್‌ಗೆ ಹೋದೆವು.

**ನವೆಂಬರ್ 7:** Alexandria ವಿಮಾನ ನಿಲ್ದಾಣಕ್ಕೆ ಕೈರೋದಿಂದ ತಲುಪಿದೆವು. ಈಜಿಪ್ಟ್‌ನ ಪಯಣ ಅಲ್ಲಿಗೆ ಮುಗಿಯಿತು. ಈ ಈಜಿಪ್ಟ್ ಪ್ರವಾಸದಂತಹ ಅತ್ಯದ್ಭುತ ಆಧ್ಯಾತ್ಮಿಕ ಪ್ರವಾಸವನ್ನು ಏರ್ಪಡಿಸಿದ್ದಕ್ಕಾಗಿ ಶ್ರೀ ಸಾಯಿಕುಮಾರ್ ರೆಡ್ಡಿಯವರಿಗೆ ನಾವು ತುಂಬಾ ತುಂಬಾ ಚಿರಋಣಿಗಳಾಗಿದ್ದೇವೆ. ನಮಗೆ ಜೀವನದಲ್ಲಿ ಇಂತಹ ಅವಕಾಶವನ್ನು ಕೊಟ್ಟಿರುವ ಪತ್ರಿಸರ್‌ಗೆ ಅನಂತ ಕೋಟಿ ವಂದನೆಗಳು.

**- ದೀಪ ಸಚಿನ್, ಬೆಂಗಳೂರು**

## ಈಜಿಪ್ಟ್ ಯಾತ್ರೆಯ ಅನುಭವಗಳು



ನನ್ನ ಹೆಸರು ದೀಪ, ಬೆಂಗಳೂರಿನಲ್ಲಿ ನೆಲೆಸಿರುತ್ತೇನೆ, ಸುಮಾರು 2 ವರ್ಷಗಳಿಂದ ಧ್ಯಾನಾಭ್ಯಾಸದಲ್ಲಿ ತೊಡಗಿರುತ್ತೇನೆ. ಈಜಿಪ್ಟ್ ಯಾತ್ರೆಯಲ್ಲಿ ಪಾಲ್ಗೊಂಡಿದ್ದು ನನ್ನ ಅದೃಷ್ಟವೆಂದು ಭಾವಿಸುತ್ತೇನೆ. ಈಜಿಪ್ಟ್ ಯಾತ್ರೆಯ ಅನುಭವಗಳನ್ನು ನಿಮ್ಮೆಲ್ಲರಲ್ಲಿ ಹಂಚಿಕೊಳ್ಳಲು ಬಯಸುತ್ತೇನೆ. ಅಕ್ಟೋಬರ್ 29 ರಿಂದ ನವಂಬರ್ 7 ವರೆಗೆ ನಮ್ಮ ಈಜಿಪ್ಟ್ ಯಾತ್ರೆ ಸುಗಮವಾಗಿತ್ತು. 2 ನವಂಬರ್ ಹುಣ್ಣಿಮೆಯಂದು ನನ್ನಲ್ಲಿ ಪತ್ರೀಜಿ ವಾಕಿನ್ ಆದರು. ಅಂದಿನಿಂದ ನನ್ನ ಅನುಭವಗಳು ಪ್ರಾರಂಭವಾಯಿತು. ಪತ್ರೀಜಿ ವಾಕಿನ್ ಆದಾಗ ನನ್ನಲ್ಲಿ ಎರಡು ರೂಪಗಳನ್ನು ಸ್ಪಷ್ಟವಾಗಿ ನೋಡಿದೆ. ದೀಪ ಎನ್ನುವ ನಾನು ಎಲ್ಲೋ ಮೂಲೆಯಲ್ಲಿದ್ದು ಪತ್ರೀಜಿ ರೂಪವನ್ನು ನೋಡಿದೆ. ಅದ್ಭುತವಾದ ಅನುಭವ. ನನ್ನ ಜೀವಿತ ಉದ್ದೇಶವನ್ನು ತಿಳಿದುಕೊಂಡೆ, ಮಾಸ್ಟರ್‌ಗಳ ಸಂದೇಶಗಳು ಬರತೊಡಗಿತು. ವನ್ನೆಸ್ ಇಷ್ಟುದಿನ ಥೀಯರಿಟಿಕಲ್ ಆಗಿ ತಿಳಿದಿದ್ದೆ, ಈಜಿಪ್ಟ್ ಯಾತ್ರೆಯಲ್ಲಿ ಪ್ರಾಕ್ಟಿಕಲ್ ಆಗಿ ಅನುಭವಿಸಿದೆ, ವಿಶ್ವದ ಜೊತೆ ಕನೆಕ್ಟಿವಿಟೀ ಅನುಭವಿಸಿದೆ, ಅಟಾಚ್ಮೆಂಟ್ ಮತ್ತು ಡಿಟಾಚ್ಮೆಂಟ್ ಅನುಭವಿಸಿದೆ. ಪ್ರತಿಯೊಬ್ಬ ಮಾಸ್ಟರ್‌ನಿಂದ ಕಲಿಯುವುದನ್ನು ಅನುಭವಿಸಿದೆ.

ಇನ್ನೂ ಪಿರಮಿಡ್‌ನಲ್ಲಿ ಧ್ಯಾನ ಮಾಡಲು ಗೀಜಾಗೆ ಹೊರಟಾಗ ಅದರ ವಾತಾವರಣಕ್ಕೆ ಹೋಗುತ್ತಲೇ ಸಹಜವಾಗಿ ಆಗಿ ನಿಶ್ಶಬ್ದ, ಆಲೋಚನಾರಹಿತಸ್ಥಿತಿ, ಧ್ಯಾನದ ಸ್ಥಿತಿಯನ್ನು ಧ್ಯಾನಕ್ಕೆ ಮುಂಚಿತವೇ ಅನುಭವಿಸಿದೆ. ಪಿರಮಿಡ್‌ನಲ್ಲಿ ಧ್ಯಾನ ಮಾಡಿದಾಗ, ಅಲ್ಲಿ ಧ್ಯಾನ ಮಾಡಿದ ಎನರ್ಜೀಸ್ ಇಂಟರ್ ಗೆಲಾಕ್ಟಿಕ್ ಕನೆಕ್ಟಿವಿಟೀಗೆ ಉಪಯೋಗವಾಗುತ್ತದೆಂದು ಅರಿವಾಯಿತು. ಹೋಗಿದ್ದ ಕಾರ್ಯ ಪರಿಪೂರ್ಣವಾಯಿತೆಂದು ತಿಳಿದುಕೊಂಡೆ. ಧ್ಯಾನದ ನಂತರದ ನನ್ನ ಆನಂದದ ಅನುಭವ ಹೇಳಲು ಪದಗಳೇ ಸಾಲದು. ಪಕ್ಷಿಗೆ ಆಕಾಶದಲ್ಲಿ ಹಾರಲು ರೆಕ್ಕೆಗಳ ಸಹಾಯ ಬೇಕು. ರೆಕ್ಕೆಗಳ ಸಹಾಯವಿಲ್ಲದೆ ನಾನು ಆನಂದವಾಗಿ ಹಾರುತ್ತಿದ್ದೆ. ಬ್ರಹ್ಮರ್ಷಿ ಪತ್ರೀಜಿ ಅವರಿಗೆ ಕೋಟಿ ಕೋಟಿ ಜನ್ಮ ಜನ್ಮದ ವಂದನೆಗಳು. ಪ್ರತಿಯೊಬ್ಬ ಪಿರಮಿಡ್ ಮಾಸ್ಟರ್ ಈಜಿಪ್ಟ್ ಗೀಜಾ ಪಿರಮಿಡ್ ವೀಕ್ಷಿಸಬೇಕೆಂದು ಸ್ವ ಅನುಭವದಿಂದ ಹೇಳುತ್ತಿದ್ದೇನೆ.

ಯಾವಾಗಲೂ ನನ್ನ ಧ್ಯಾನಕ್ಕೆ ಸಹಾಯಕಾರಿ ಮತ್ತು ಪ್ರೋತ್ಸಾಹ ನೀಡಿದ ಮತ್ತು ಕೇಳಿದ ತಕ್ಷಣವೇ, ಒಪ್ಪಿ, ನನ್ನನ್ನು ಈಜಿಪ್ಟ್‌ಗೆ ಕಳುಹಿಸಿದ ನನ್ನ ಪತಿ ಸಚ್ಚಿನ್‌ಗೆ ಕೃತಜ್ಞತೆಗಳು. ನನ್ನ ಮಗ ಭೂವನ್ ನನಗೆ ಪ್ರೇರಣೆ ಮತ್ತು ತುಂಬ ಸಪ್ಪೋರ್ಟಿವ್. ಧ್ಯಾನಕ್ಕೆ ಸದಾ ಸಹಕರಿಸಿದ ನನ್ನ ತಂದೆ-ತಾಯಿಗೆ ವಂದನೆಗಳು. ಧ್ಯಾನಕ್ಕೆ ಯಾವಾಗಲೂ ಸ್ಫೂರ್ತಿಯಾದ ನನ್ನ ಕಸಿನ್ ದಿವ್ಯಶ್ರೀ, ಗೆಳತಿ ಅನಿತಾ, ಆದೋನಿ ಪ್ರೇಮ್ನಾಥ್ ಸರ್ ಇವರಿಗೆ ವಂದನೆಗಳು.

The message I got on the last day in Egypt is, OBSERVE EVERYTHING AS YOU OBSERVE YOUR BREATH.

**- ದೀಪ ಸಚ್ಚಿನ್, ಬೆಂಗಳೂರು.**



ನನ್ನ ಹೆಸರು ಸುಷ್ಮಾ , ಬೆಂಗಳೂರಿನಲ್ಲಿ ವಾಸಿಸುತ್ತಿದ್ದೇನೆ. ಕಳೆದ ಎರಡು ವರ್ಷಗಳಿಂದ ಧ್ಯಾನಾಭ್ಯಾಸ ಮಾಡುತ್ತಿದ್ದೇನೆ. ಈಜಿಪ್ಟ್ ಪ್ರವಾಸ ನನಗೊಂದು ಅತ್ಯುನ್ನತ ಅನುಭವ.

ಗೀಜ ಪಿರಮಿಡ್‌ನಲ್ಲಿ ಧ್ಯಾನ ಮಾಡಿದಾಗ ಮಾತ್ರ ಮನಸ್ಸು ಶಾಂತವಾಗಿತ್ತು. ದೇಹ ಭಾರವಾಗಿತ್ತು. ಆದಾದ ನಂತರದ ಅನುಭವಗಳು ಮತ್ತು ಮನಸ್ಸಿನ ಸ್ಥಿತಿ ಅಮೋಘ. ಅಂದಿನಿಂದ ನಿಶ್ಶಬ್ದತೆಯಲ್ಲಿ ನನ್ನನ್ನು ನಾನು ಆಲಿಸುತ್ತಿದ್ದೇನೆ. ಹಿಂತಿರುಗಿ ಬಂದ ಮೇಲೆ ಮನೆಯ ವಾತಾವರಣ ಕೂಡ ಬದಲಾಗಿದೆ, ಎಲ್ಲರು ಸಂತೋಷದಿಂದಿದ್ದೇವೆ. ನನ್ನ 3 ವರ್ಷದ ಮಗಳು 2 ದಿನಕ್ಕೂ ಹೆಚ್ಚುಕಾಲ ನನ್ನನ್ನು ಬಿಡದವಳು 11 ದಿನಗಳಲ್ಲಿ ಒಮ್ಮೆ ಕೂಡ ನನ್ನ ಕುರಿತು ಕೇಳಿಲ್ಲ ಮತ್ತು ತುಂಬ ಸಂತೋಷದಿಂದಿದ್ದಳು. ನಮ್ಮ ಗುರುಗಳಾದ ಬ್ರಹ್ಮರ್ಷಿ ಪತ್ರೀಜಿ ರವರಿಗೆ ನನ್ನ ನಮಸ್ಕಾರಗಳು.

- ಸುಷ್ಮಾ.



ನನ್ನ ಹೆಸರು ಕೀರ್ತಿ. ನಾನು ಬೆಂಗಳೂರಿನಲ್ಲಿ ವಾಸಿಸುತ್ತಿದ್ದೇನೆ. ನನ್ನ ಅನುಭವ ನಿಮ್ಮಬಳಿ ಹಂಚಿಕೊಳ್ಳೋಕೆ ತುಂಬಾ ಖುಷಿಯಾಗುತ್ತೆ. ಸುಮ್ನೆ ಹೀಗೆ ಆವತ್ತು ನಾನೂ ಕೂಡಾ ಈಜಿಪ್ಟ್‌ಗೆ ಹೋಗುವ ಅಂತಹೇಳಿ ಪತ್ರೀಜಿಯವರ ಗುಂಪಿನಲ್ಲಿ ಶಾಮೀಲಾದೆ. ಆ ನಿರ್ಧಾರ ತಗೋಂಡಿದ್ದೇ ಒಂದು ಅದ್ಭುತ, ಆದಾದ ಮೇಲೆ ಎಲ್ಲವೂ ಮಧುರ ಕ್ಷಣಗಳೆ. ಗೀಜಾ ಪಿರಮಿಡ್ ಒಳಗೆ ಧ್ಯಾನ ಮಾಡುವಾಗ ನನಗೊಂದು ಸಂದೇಶ ಸಿಕ್ಕಿತು, ಅದೇನಂದ್ರೆ "ನಾವು ಲೈಫ್‌ನ್ನು ಎಂಜಾಯ್ ಮಾಡ್ಲಿಕ್ಕೆ ಈ ಭೂಮಿಯ ಮೇಲೆ ಬಂದದ್ದು" ಎಂದು. ಧ್ಯಾನ ಮಾಡಿ ಒಂದು ದಿನ ಕಳೆದ ನಂತರ ನನ್ನಲ್ಲಿ ಒಂದು ಬಗೆಯ ಏಕತೆಯ ಭಾವನೆ ಮೂಡಿ ಬಂತು. ಧ್ಯಾನದಲ್ಲಿದ್ದಾಗ್ಲೂ ಕೂಡ ಬೇರೆ ಪ್ರಪಂಚಗಳೊಂದಿಗೆ ಕನೆಕ್ಟ್ ಆಗ್ತಿರೋದು ಗೊತ್ತಾಯ್ತು. ಆ ಪ್ರಪಂಚದವರು ಭೂಮಿಯಲ್ಲಿ ಬಳಿಯ ಶಕ್ತಿಯ ಪದರಗಳನ್ನು ತುಂಬಿಸುವಲ್ಲಿ ನಮಗೆ ಸಹಾಯ ಮಾಡ್ತಿದ್ದಾರೆ. ಭೂಮಿಯನ್ನು ಪೂರ್ತಿಯಾಗಿ ಈ ಶಕ್ತಿಯಿಂದ ಹೊದಿಸುತ್ತಿದ್ದಾರೆ. ಪತ್ರೀಜಿಯವರಿಗೆ ನನ್ನ ಧನ್ಯವಾದಗಳನ್ನು ಅರ್ಪಿಸುತ್ತಿದೀನಿ.

- ಕೀರ್ತಿ



ನನ್ನ ಹೆಸರು ಶಿರೀಷ, ಊರು ಬೆಂಗಳೂರು. ನಾನು ಈಜಿಪ್ಟ್‌ಗೆ ಹೋಗುತ್ತಿದ್ದೇನೆಂದರೆ ನನಗೆ ಮರೆಯಲಾಗದ ಅದ್ಭುತ ಘಟನೆ. ನಾನು 'ರಹಸ್ಯ' ಅನ್ನು ಪುಸ್ತಕ ಓದಿದ ಮೇಲೆ, ನನ್ನಲ್ಲಿ ಬಂದ ಬದಲಾವಣೆಯಿಂದ ನನಗೆ ಅನುಕೂಲವಿಲ್ಲದ ವಿಷಯಗಳೆಲ್ಲಾ ಅನುಕೂಲಕರವಾಗಿತ್ತು ಆದ್ದರಿಂದ ನನಗೆ ಈಜಿಪ್ಟ್‌ಗೆ ಧ್ಯಾನ ಯಾತ್ರೆಗೆ ಹೋಗಲು ಸಹಾಯವಾಯಿತು.

ನೈಲು ನದಿಯಲ್ಲಿ ಕ್ರೂಜ್ ಪ್ರಯಾಣ ನಮಗೆ ತುಂಬಾ ಸಂತೋಷ ತಂದಿತ್ತು. ಹುಣ್ಣಿಮೆಯ ದಿನ ನಾವು ಧ್ಯಾನ ಮಾಡುತ್ತಿರುವಾಗ ಬುದ್ಧ, ಮಹಾವತಾರ್ ಬಾಬಾಜಿ, ಈಜಿಪ್ಷಿಯನ್ ಮಾಸ್ಟರ್ಸ್ ಹಾಗೆ ಎಷ್ಟೋ ಮಾಸ್ಟರ್ಸ್ ಅಲ್ಲಿಗೆ ಬಂದಿದ್ದರು. ಪತ್ರೀಜಿ ಈಜಿಪ್ಟ್ ಯಾತ್ರೆಯ ಮೊದಲಿನಿಂದ ಕೊನೆಯ ವರೆಗೆ ನಮ್ಮ ಜೊತೆಯಲ್ಲಿಯೇ ಇದ್ದರು. ಆ ಶಕ್ತಿಯನ್ನು ನಾವೆಲ್ಲರೂ ತುಂಬಾ ಅನುಭವಿಸಿದೆವು. ಹುಣ್ಣಿಮೆಯ ದಿನ ಕೋಣೆಯೆಲ್ಲಾ ಸುಗಂಧದ ಪರಿಮಳ ತುಂಬಿತ್ತು.

ನಾವೆಲ್ಲರೂ ಎದುರು ನೋಡುತ್ತಿದಂತಹ ಗೀಜಾ ಪಿರಮಿಡ್ ನಮ್ಮ ಕಣ್ಣು ಮುಂದೆ ಬಂದೆ ಬಿಟ್ಟಿತ್ತು. ಒಳಕ್ಕೆ ಹೋದ ತಕ್ಷಣವೇ ಯೋಚನಾ ರಹಿತ ಸ್ಥಿತಿಗೆ ಹೋದೆವು. ಕಿಂಗ್ಸ್ ಚೇಂಬರ್‌ನಲ್ಲಿ ಕುಳಿತು ಧ್ಯಾನ ಮಾಡುತ್ತಿರುವಾಗ ಅತ್ಯಂತ ಹೆಚ್ಚಿನ ಶಕ್ತಿಯನ್ನು ಪಡೆದೆವು. ಅಲ್ಲಿ ನನಗೆ ಒಂದು ಮೆಸ್ಸೇಜ್ ಬಂತು "ಯು ಆರ್ ಎನ್‌ಲೈಟೆನ್ಡ್." ಅಲ್ಲಿ ನಮಗೆ ಏಕತಾ ಭಾವನೆ ಬಂತು. ಅಲ್ಲಿ ನಾನು ನನ್ನ ಹಿಂದಿನ ಜನ್ಮಗಳನ್ನು ನೋಡಿಕೊಂಡೆ. ಒಟ್ಟಾರೆ ಈಜಿಪ್ಟ್ ಧ್ಯಾನ ಯಾತ್ರೆಯು ತುಂಬಾ ಸಂತೋಷ ಮತ್ತು ಅದ್ಭುತವಾಗಿ ಮುಗಿಸಿದೆವು. ಈ ಅವಕಾಶ ಕೊಟ್ಟಂತಹ ಪತ್ರೀಜಿಯವರಿಗೆ ನನ್ನ ಅನಂತ ವಂದನೆಗಳು ಮತ್ತು ನನಗೆ ಈಜಿಪ್ಟ್ ಧ್ಯಾನ ಯಾತ್ರೆಗೆ ಹೋಗಲು ಸಹಕರಿಸಿದ ನನ್ನ ಪತಿಗೆ ನನ್ನ ವಂದನೆಗಳು.

- ಶಿರೀಷ



ನನ್ನ ಹೆಸರು ರೇವತಿ ದೇವಿ, ವಿಶಾಖಪಟ್ಟಣ. ಈಜಿಪ್ಟ್ ಧ್ಯಾನ ಯಾತ್ರೆ ಒಟ್ಟಾಗಿ ಅದ್ಭುತಗಳು, ವಿನೋದಗಳ ಜೊತೆಗೆ ಆಧ್ಯಾತ್ಮಿಕತೆ ಸಂತೋಷ, ಸಾಹಸ ಎಲ್ಲರಿಗೂ ಹೆಚ್ಚಾಗಿ ಹಂಚಿ, ಜನ್ಮ ಜನ್ಮ ಗಳ ಮಧುರವಾದ ಅನುಭವವಾಗಿ ಉಳಿದುಕೊಂಡಿದೆ. ನಂತರ ನೈಲು ನದಿಯ ಸೌಂದರ್ಯ, ಪ್ರಾಚೀನ ಈಜಿಪ್ಟ್ ಸಂಸ್ಕೃತಿಯನ್ನು ನೋಡುತ್ತಾ, ಕ್ರೂಜ್‌ನಲ್ಲಿ ಪ್ರಯಾಣಿಸುತ್ತಿರುವಾಗ ನಮಗೆ ಸುಂದರವಾದ ಅನುಭವ. ಆನಂತರ ಕೈರೋ ಪಟ್ಟಣ ಸೇರಿದಾಗ ಎಲ್ಲರಲ್ಲಿಯೂ ಏಕತಾ ಭಾವನೆ ಮಾಡಿತ್ತು. ಗೀಜಾ ಪಿರಮಿಡ್ ಒಳಗೆ ಪತ್ರೀಜಿ ನೋಡಿದ್ದು, ಅಲ್ಲಿರುವಂತಹ ಶಕ್ತಿಯನ್ನು ತುಂಬಿಸಿಕೊಂಡ ನಾನೆ ಅದೃಷ್ಟವಂತೆ ಎಂದು ಭಾವಿಸುತ್ತೇನೆ. ಪ್ರತಿಯೊಬ್ಬ ಪಿರಮಿಡ್ ಮಾಸ್ಟರ್ ಈಜಿಪ್ಟನ್ನು ದರ್ಶಿಸಲೇಬೇಕು. ಗೀಜಾ ಪಿರಮಿಡ್ ಒಳಗೆ ಕುಳಿತು ಧ್ಯಾನ ಮಾಡುವುದೇ ನಮ್ಮ ಮಹೋನ್ನತ ಗುರಿ. ನನ್ನ ಅನುಭವಗಳನ್ನು ನಿಮ್ಮೊಂದಿಗೆ ಹಂಚಿಕೊಳ್ಳಲು ಅವಕಾಶಮಾಡಿಕೊಟ್ಟ ಧ್ಯಾನ ಕಸ್ತೂರಿ ಮಾಸ್ಟರ್‌ಗೆ ನನ್ನ ಧನ್ಯವಾದಗಳು.

- ರೇವತಿ ದೇವಿ



# ರಿಚರ್ಡ್ ಬಾಕ್



ಸ್ನೇಹಿತರೆ,

ಈವತ್ತು ನಾವು "ರಿಚರ್ಡ್ ಬಾಕ್" (Richard Bach) ಎಂಬ ಹೊಸ ಯುಗದ ಗ್ರಾಂಡ್ ಮಾಸ್ಟರ್‌ರವರಿಂದ ಕಲಿಯೋಣ. ಈಗ ಅವರಿಂದ ದೊರೆತ ಕೆಲವು ನುಡಿಮುತ್ತುಗಳನ್ನು ಪರಿಶೀಲಿಸಿ ನೋಡೋಣ, ಬನ್ನಿ.

"Allow the world to live as it chooses and allow yourself to live as you choose."

"ಈ ಪ್ರಪಂಚವನ್ನು, ಈ ಪರಿಸರವನ್ನು ತನ್ನ ಪಾಡಿಗೆ ತಾನಿರಲು ಬಿಡಿ. ಅದರ ಇಷ್ಟಾನುಸಾರ ಅದನ್ನು ಬಿಟ್ಟುಬಿಡಿ. ನಿಮ್ಮ ಇಷ್ಟಕ್ಕನುಗುಣವಾಗಿ ನೀವಿರಲು ಅವಕಾಶ ಮಾಡಿಕೊಳ್ಳಿ. ನಿಮಗೆ ನೀವೇ ನಿಬಂಧನೆಗಳನ್ನು ವಿನಾಕಾರಣ ಹಾಕಿಕೊಳ್ಳಬೇಡಿರಿ."

'ನೀವೂ ಬಾಳಿರಿ, ಬೇರೆಯವರನ್ನು ಬಾಳಲು ಬಿಡಿ' ಎಂಬುದೇ ಜೀವನದ ಮುಖ್ಯ ಸಂದೇಶ. ಪ್ರತಿಯೊಂದು ಆತ್ಮವೂ ತನ್ನ ದೇಹವನ್ನು, ಜನನ ಹೊಂದುವ ಸ್ಥಳವನ್ನು, ತನ್ನ ಕುಟುಂಬ, ಸ್ನೇಹಿತರು, ಹಾಗೂ ಸನ್ನಿವೇಶಗಳನ್ನು ತಾನೇ ಸ್ವತಃ ಆಯ್ಕೆ ಮಾಡಿಕೊಂಡು, ಈ ಭೂಮಿಗೆ ಬರುತ್ತದೆ. ಆದ್ದರಿಂದ, ಬೇರೆಯವರ ಸ್ವಂತ ವಿಚಾರಗಳಲ್ಲಿ ಮೂಗು ತೂರಿಸುವುದು ಆಧ್ಯಾತ್ಮಿಕ ಸಭ್ಯತೆ ಎನಿಸಿಕೊಳ್ಳುವುದಿಲ್ಲ. ಇತರರು ತಮ್ಮ ವೈಯಕ್ತಿಕ ಆಯ್ಕೆಗಳನ್ನು ಅನುಸರಿಸಿ ಜೀವಿಸಲು ದಾರಿ ಮಾಡಿಕೊಡಿ. ಹಾಗೆಯೆ, ನೀವೇ ಆಯ್ದುಕೊಂಡ ಈ ಜೀವನವನ್ನು ನಿಮ್ಮದೇ ಸ್ವಂತ ರೀತಿಯಲ್ಲಿ ಮುಂದುವರಿಸಿ, ಅದರಲ್ಲಿಯ ಅನುಭವಗಳನ್ನು ಆಸ್ವಾದಿಸಿರಿ. ಹಲವು ಬಾರಿ ಜನರು ತಾವು ನಿಸ್ಸಂದೇಹವಾಗಿ ಪಾಲ್ಗೊಳ್ಳಬಹುದಾದ ಚಟುವಟಿಕೆಗಳನ್ನು ತ್ಯಜಿಸಿಬಿಡುತ್ತಾರೆ. ಇದರಿಂದ ಅವರಲ್ಲಿ ಒಂದು ಬಗೆಯ ಜಡತ್ವವು ಉಂಟಾಗುತ್ತದೆ. ಮುಂದೆ ಅವರು ನೈಸರ್ಗಿಕವಾದ ಅಥವಾ ಸಹಜವಾದ, ಬಲು ಸರಳವಾದ ವಿಷಯಗಳಿಗೂ ಸಾಮಾನ್ಯವಾಗಿ ಸ್ಪಂದಿಸುವುದೇ ಇಲ್ಲ. ಉದಾಹರಣೆಗೆ ತುಂಬಾ ದುಃಖವಾದಾಗ ಅಳುವುದು ಸಹಜ. ಆದರೆ, ಸುತ್ತಮುತ್ತ ಇರುವವರು ಅಣಕಿಸಬಹುದೆಂದು ಕಾಠಿಣ್ಯವನ್ನು ಪ್ರದರ್ಶಿಸುವುದು, ಹಾಸ್ಯಮಯ ಸನ್ನಿವೇಶದಲ್ಲಿ ಮನಸಾರೆ ನಕ್ಕರೆ ತನ್ನ ಕೈಕೆಳಗೆ ಕೆಲಸ ಮಾಡುವವರು ನಾಳೆಯಿಂದ ಅವನನ್ನು ಹಗುರವಾಗಿ ಮಾತನಾಡಿಸಿದರೆ, ಮರ್ಯಾದೆ ಕೊಡದೆ ಇದ್ದರೆ, ಎಂದು ಹೇಳಿ ಮುಖವನ್ನು ಗಂಟುಮಾಡಿ ಗಂಭೀರವಾಗಿ ವರ್ತಿಸುವುದು. ಹೀಗಲ್ಲದೆ, ಸಹಜವಾಗಿ ಅಂತರ್ಯದಿಂದ ಚಿಮ್ಮುವ ಭಾವನೆಗಳನ್ನು ಹರಿಯಲು ಬಿಟ್ಟು, ಪ್ರಕೃತಿಯ ಹರಿವಿನೊಂದಿಗೆ ಶೃತಿಸೇರಿಸಿದರೆ, ಜೀವನವು ಬಲು ಮಧುರ. ಇದರ ಬಗ್ಗೆ ಪೂರ್ತಿಯಾಗಿ ಅರ್ಥಮಾಡಿಕೊಳ್ಳಬೇಕಾದರೆ, ಪ್ರತಿಯೊಬ್ಬರೂ ತಮ್ಮ ತಮ್ಮ ಪಾತ್ರವನ್ನು, ಈ ಭೂಮಿಯ ಮೇಲೆ ಪ್ರತ್ಯೇಕವಾಗಿ ನಿಗದಿಪಡಿಸಿರುವ ಪ್ರಣಾಳಿಕೆಯನ್ನು ಅರಿಯಬೇಕು. ಅವರವರ ಜೀವನದ ಉದ್ದೇಶವನ್ನು ಅರಿತಾಗ, ತಮ್ಮ ಜೀವನದಲ್ಲಿ ಎದುರಾದ ಸನ್ನಿವೇಶಗಳು, ಭೇಟಿಯಾದ, ಜನರ ಬಗ್ಗೆ ಪೂರ್ತಿ ತಿಳುವಳಿಕೆ ಉಂಟಾಗಿ, ಸಮಂಜಸವಾದ ರೀತಿಯಲ್ಲಿ ನಿರ್ಣಯಗಳನ್ನು ತೆಗೆದುಕೊಳ್ಳಬಹುದು. ಈ ಮಟ್ಟಕ್ಕೆ ಮನುಷ್ಯ ಬೆಳೆಯಬೇಕಾದರೆ ಧ್ಯಾನವೊಂದೇ ಮಾರ್ಗ. ಚಿಕ್ಕವಯಸ್ಸಿನಿಂದಲೇ ಧ್ಯಾನವನ್ನು ಅಭ್ಯಾಸ ಮಾಡಿದರೆ, ಜೀವನದ ನಕ್ಷೆ, ಅದರ ಉದ್ದೇಶ, ಮಹತ್ವ ಅರ್ಥವಾಗುತ್ತದೆ. ಆಗ ಯಾರನ್ನೂ ತಿರಸ್ಕರಿಸದೆ, ಪ್ರತಿ ಕ್ಷಣವನ್ನು ಪ್ರಕೃತಿಯ ನಿಯಮಾನುಸಾರ, ಹಾಗು ತನ್ನ ಇಚ್ಛಾನುಸಾರ ಹರಿಯಲು ಬಿಟ್ಟು ಚೈತನ್ಯದಲ್ಲಿ ಲಯಬದ್ಧವಾಗಿ ಲೀನವಾಗಬಹುದು.

"There are no mistakes. The events we bring upon ourselves, no matter how unpleasant, are necessary in order to learn what we need to learn; whatever steps we take, they're necessary to reach the places we've chosen to go."

**"ಇಲ್ಲಿ ಯಾವ ಅಚಾತುರ್ಯಗಳೂ, ತಪ್ಪುಗಳೂ ಇಲ್ಲ. ನಾವೇ ಉಂಟುಮಾಡಿಕೊಂಡ ಘಟನೆಗಳು. ಅವು ಎಷ್ಟೇ ಅಹಿತಕರವಾದರೂ ಅವು ಅವಶ್ಯಕವಾದವು. ಆ ಅನುಭವಗಳಿಂದ ನಾವು ಕಲಿಯಬೇಕಾದುದು ಎಷ್ಟೋ ಇವೆ. ತಪ್ಪೋ-ಸರಿಯೋ, ಯಾವುದೇ ಹೆಜ್ಜೆಗಳು ಬಲು ಅವಶ್ಯಕ. ಇಲ್ಲಿ ವಿಮರ್ಶೆಗೆ ಜಾಗವಿಲ್ಲ. ಅದು ಪ್ರಕೃತಿಯ ನಿಯಮಕ್ಕೆ ವಿರುದ್ಧ."**

ನಿಮ್ಮ ಬಾಳಿನಲ್ಲಿ ಉಂಟಾಗುತ್ತಿರುವ ಮಧುರ ಹಾಗೂ ಅಹಿತಕರ ಘಟನೆಗಳು ಏಕೆ ಉಂಟಾಗುತ್ತದೆ. ಅವು ನಿಮ್ಮನ್ನೇ ಏಕೆ ಹುಡುಕಿಕೊಂಡು ಬರುತ್ತವೆ. ನೀವೇ ಅದನ್ನು ಆಹ್ವಾನಿಸದ ಹೊರತು ಅವು ಬರುವುದಿಲ್ಲ. ಕರ್ಮ ಸಿದ್ಧಾಂತವನ್ನು ಅರಿತರೆ, ಎಲ್ಲವನ್ನೂ ಸುಲಭವಾಗಿ ಒಪ್ಪಿಕೊಳ್ಳುವ ಸಾಮರ್ಥ್ಯ ಉಂಟಾಗುತ್ತದೆ. ಕರ್ಮದ ನಿಯಮಾನುಸಾರ ಎಲ್ಲವೂ ಪೂರ್ಣಗೊಳ್ಳುವ, ಗುರಿಸೇರುವ ಹಾದಿಯಲ್ಲಿದೆಯೆಂದು ಅರ್ಥಮಾಡಿಕೊಳ್ಳುವ ವಿವೇಕ ಉಂಟಾಗುತ್ತದೆ. ಹಿರಿಯರು, ತಂದೆ ತಾಯಿಯರು ಈ ವಿಷಯವನ್ನು ಕಲಿತು, ಅರಿತು ತಮ್ಮ ಮಕ್ಕಳಿಗೆ ಇದನ್ನು ಕಲಿಸಿ, ತಿಳಿಹೇಳಿ "ಇದು ನಿನ್ನ ಕಲಿಕೆಗಾಗಿ, ಈ ಅನುಭವದಿಂದ ನೀನು ಬಾಳಿನಲ್ಲಿ ಬಲು ಎತ್ತರಕ್ಕೆ ಬೆಳೆಯುತ್ತೀಯೆ" ಎಂದು ಪ್ರೋತ್ಸಾಹಿಸಿ, ಧೈರ್ಯ ತುಂಬಬೇಕು. ಧ್ಯಾನಸ್ಥಿತಿಯಲ್ಲಿ ಕರ್ಮದ ನಿಯಮವನ್ನು ಪರಿಪೂರ್ಣವಾಗಿ ಅರಿಯಬಹುದು.

"Don't believe what your eyes are telling you. All they show is limitation. Look with your understanding, find out what you already know, and you'll see the way to fly."

**"ನಿಮ್ಮ ಕಣ್ಣುಗಳನ್ನು ಸುಮ್ಮನೆ ನಂಬುವ ಅಭ್ಯಾಸವಾಗಿ ಬಿಟ್ಟಿದೆ ನಿಮಗೆ. ಅದನ್ನು ನಂಬಬೇಡಿ. ಅವು ತೋರಿಸುವ ದೃಶ್ಯಗಳಲ್ಲಿ ಬಹಳಷ್ಟು ಇತಿ-ಮಿತಿಗಳು ಇವೆ. ಭೌತಿಕತೆಯಲ್ಲಿ ನೋಡಲು ಸಿಗುವ ವಿಷಯವು ಶಾಶ್ವತವಲ್ಲ, ಅದರಲ್ಲಿ ನಿರಂತರವಾಗಿ ಬದಲಾವಣೆ ಇರುತ್ತದೆ. Actually ಬದಲಾವಣೆ ಬಿಟ್ಟರೆ ಅಲ್ಲಿ ಇನ್ನೇನೂ ಇಲ್ಲ. ನಿಮ್ಮ ಸ್ವಂತ**

**ತಿಳುವಳಿಕೆಯಿಂದ ಅದನ್ನು ದರ್ಶಿಸಿದಾಗ ನಿಮಗದರ ಅರಿವಾಗುತ್ತದೆ. ಅಂದರೆ, ಯಾವುದು ತಾತ್ಕಾಲಿಕ ಅಥವಾ ಕ್ಷಣಿಕ, ಯಾವುದು ಶಾಶ್ವತ ಎನ್ನುವುದು ಸ್ಪಷ್ಟವಾಗಿ ತಿಳಿಯುತ್ತದೆ. ಆಗ ನೋಡಿ, ನೀವು ಯಾವ ಮಟ್ಟಕ್ಕೆ ಬೆಳೆದಿದ್ದೀರಿ ಎಂದು."**

ಕಣ್ಣುಗಳು ಮನಸ್ಸಿನ ದ್ವಾರಗಳು. ಈ ಚರ್ಮ ಚಕ್ಷುಗಳು ನಿಮ್ಮ ಅನುಭವಕ್ಕೆ ತರುವ ವಿಷಯಗಳು ಬಹುತೇಕ ನಿಮ್ಮ ಬೆಳವಣಿಗೆಗೆ, ಆತ್ಮದ ಅಭಿವೃದ್ಧಿಗೆ ತೊಡಕುಂಟು ಮಾಡುತ್ತವೆ. ನೋಡುವಾಗ ಸಾಮಾನ್ಯವಾಗಿ ಉಂಟಾಗುವ ಮಾಯೆಯ ತೆರೆಯನ್ನು ದಿವ್ಯ ಚಕ್ಷುವಿನ ಸಹಾಯದಿಂದ ಸರಿಸಿ, ಎಲ್ಲೆಗಳನ್ನು ದಾಟಿ ನೋಡಿದಾಗ ಅದರ ಪೂರ್ಣಜ್ಞಾನ ಪಡೆಯುತ್ತೀರಿ. ಇದಕ್ಕೆ ನಿಮ್ಮ ಬುದ್ಧಿಯ ತೀಕ್ಷ್ಣತೆ ಹಾಗೂ ಚುರುಕುತನದ ಅವಶ್ಯಕತೆ ಇದೆ. ನೀವು ಕಣ್ಣು ಮುಚ್ಚಿ ಮನಸ್ಸನ್ನು ಖಾಲಿ ಮಾಡಿದಾಗ ಸತ್ಯವನ್ನು ನೋಡುವಿರಿ. ಅದಾದ ನಂತರ, ನಿಮ್ಮನ್ನು ತಡೆಯುವವರೇ ಇಲ್ಲ.

"Every person, all the events of your life are there because you have drawn them there. What you choose to do with them is up to you."

**"ನಿಮ್ಮ ಎಲ್ಲಾ ಆಗು ಹೋಗುಗಳನ್ನು ನೀವೇ ಆಹ್ವಾನಿಸಿದ್ದೀರಿ. ಆದ್ದರಿಂದ, ಅವುಗಳನ್ನು ಹೇಗೆ ಬಳಸಿಕೊಳ್ಳುತ್ತೀರಿ ಎಂಬುದು ನಿಮಗೆ ಬಿಟ್ಟಿದ್ದು."**

ಈಗಾಗಲೇ ಹೇಳಿರುವಂತೆ ನಿಮ್ಮ ವಾಸ್ತವಕ್ಕೆ ನೀವೇ ಕಾರಣ. ಅವುಗಳಿಗೆ ನೀವೇ ಮಾಲೀಕರು. ಆದರೆ, ಆಸಕ್ತಿಕರ ವಿಚಾರ ವೇನೆಂದರೆ, ನೀವು ಈ ಸನ್ನಿವೇಶಗಳನ್ನು, ಹಾಗೂ ವ್ಯವಹರಿಸುತ್ತಿರುವ, ಬಾಳುತ್ತಿರುವ ಜನರಿಂದ ಉಂಟಾಗುವ ಅನುಭವಗಳಿಗೆ ಯಾವ ರೀತಿ ಉಪಚರಿಸುತ್ತೀರಿ? ಎಂಬುದಾಗಿದೆ. ನೀವೇ ನಿರ್ಮಿಸಿಕೊಂಡಿರುವ ಜೀವನದಿಂದ ಉಂಟಾಗುತ್ತಿರುವ ಅನುಭವಗಳಿಂದ ನೀವೇನು ಮಾಡುತ್ತೀರಿ? ಏಕೆಂದರೆ, ನೀವು ಏನೇ ನಿರ್ಧಾರ ಕೈಗೊಂಡರೂ, ಅದು ನಿಮ್ಮ, ನಿಮ್ಮವರ ಹಾಗೂ ಬೇರೆಯವರ ಬಾಳಿನ ಹಾದಿಯನ್ನು ಪ್ರಭಾವಿತಗೊಳಿಸುತ್ತದೆ. ನಿರ್ಧಾರ ನಿಮ್ಮ ಕೈಯಲ್ಲಿದ್ದರೂ ಸಹ, ಆ ನಿರ್ಧಾರಗಳ ಪರಿಣಾಮವನ್ನು ಎದುರಿಸಬೇಕಾಗುವುದು. ಹಾಗಾದರೆ ಏನು ಗತಿ? ಚಿಂತೆ ಬೇಡ. ಸರಿಯಾದ ಜ್ಞಾನ ಇದ್ದರೆ, ಸರಿಯಾದ ನಿರ್ಧಾರವನ್ನೇ ತೆಗೆದುಕೊಳ್ಳುತ್ತೇವೆ. ಸರಿಯಾದ ಜ್ಞಾನ ಧ್ಯಾನದಿಂದ ಮಾತ್ರ ಲಭ್ಯ. ಎಳೆ ವಯಸ್ಸಿನಿಂದಲೇ ಧ್ಯಾನದ ಅಭ್ಯಾಸದಿಂದ ಇಂತಹ ಪರಿಪಕ್ವ ಜ್ಞಾನವನ್ನು ಸಿದ್ಧಿಸಿಕೊಳ್ಳಬಹುದು.

"Here is a test to find whether your mission on Earth is finished: If you're alive, it isn't."

**"ಭೂಮಿಗೆ ಬಂದ ನಿಮ್ಮ ಕೆಲಸ ಮುಗಿಯಿತೇ ಎಂದು ತಿಳಿಯಲು ಇಲ್ಲಿ ಒಂದು ಚಿಕ್ಕ ಪರೀಕ್ಷೆ. ನಿಮಗಾಗಿ, ನೀವಿನ್ನೂ ಜೀವಂತವಾಗಿ ಇದ್ದರೆ, ನಿಮ್ಮ ಕೆಲಸ ಇನ್ನೂ ಮುಗಿದಿಲ್ಲವೆಂದೇ ಅರ್ಥ."**

ಎಂಥ ಅದ್ಭುತ ವಾಕ್ಯ. ಬಹಳ ಸರಳವಾದುದು. ನೀವಿನ್ನೂ ನಿಮ್ಮ ದೇಹದೊಂದಿಗೆ ಇದ್ದೀರಿ ಎಂದ ಮೇಲೆ ನೀವು ಭೂಮಿಗೆ ಬಂದ ಕೆಲಸ ಇನ್ನೂ ಮುಗಿದಿಲ್ಲವೆಂದೇ ಅರ್ಥ. ಹಾಗಾದರೆ, ನಮ್ಮ ಜನ್ಮದ



ಉದ್ದೇಶ, ಗುರಿ ಏನು? ಯಾರಾದರೂ ಇದನ್ನು ಬಿಡಿಸಿ ಹೇಳಬಲ್ಲರೆ? ಬೇಕಾಗಿಲ್ಲ, ಯಾರೂ ನಮಗೆ ಹೇಳಬೇಕಿಲ್ಲ, ಸ್ವತಃ ನಾವೇ ಅದನ್ನು ತಿಳಿದುಕೊಳ್ಳಬಹುದು. ಕಣ್ಣುಮುಚ್ಚಿ ಧ್ಯಾನದಲ್ಲಿ ಕುಳಿತರೆ, ಎಲ್ಲವೂ ತಿಳಿಯುತ್ತದೆ. ಹಾಗಿಲ್ಲವಾದಲ್ಲಿ "ಪುನರಪಿ ಜನನಂ ಪುನರಪಿ ಮರಣಂ", ಮರುಜನ್ಮ-ಪುನರ್ಜನ್ಮ ಒಂದರ ಹಿಂದೆ ಒಂದು. ನಮ್ಮ ಕೆಲಸಮುಗಿಸಿ ಹೊರಟು ಬಿಡಬೇಕು. ಮತ್ತೆ ಬರುವುದಾದರೆ, ಹೊಸ ಕೆಲಸಕ್ಕಾಗಿ, ಸಂಕಲ್ಪವನ್ನು ಪೂರೈಸಲು ಬರಬೇಕು. ಅದನ್ನು ಮರೆತರೆ, ನಾವು "Fail" ಆಗಿದ್ದೀವಿ ಎಂದೇ ಅರ್ಥ. ನಾವು ಬಂದ ಕಾರ್ಯವನ್ನು ಜ್ಞಾಪಿಸಿಕೊಳ್ಳಬೇಕಾದರೆ, ನಾವು ಧ್ಯಾನ ಮಾಡಬೇಕು. ನಾವು ಹುಟ್ಟಿದಾಗ, ಮಗುವಾಗಿದ್ದಾಗ ನಾವು ಬಂದ ಕಾರ್ಯ ನೆನಪಿರುತ್ತದೆ. ಕಾಲಕ್ರಮೇಣ ಮರೆಯುತ್ತೇವೆ. ಮತ್ತೆ ನಾವದನ್ನು ನೆನಪಿಸಿಕೊಳ್ಳುವುದಕ್ಕೆ ಮತ್ತೆ ಮಗುವಾಗಬೇಕು. ಮನೋಪಟಲದಲ್ಲಿ ಆ ಮುಗ್ಧತೆಯನ್ನು ಮನಗಾಣಬೇಕಾದರೆ ಧ್ಯಾನ ಸ್ಥಿತಿಯಲ್ಲಿ ಮಾತ್ರ ಸಾಧ್ಯ. ಆಗ ನಮ್ಮ ಜನ್ಮದ ಉದ್ದೇಶವನ್ನು ಸ್ಮರಿಸಿಕೊಳ್ಳಲು ಸಾಧ್ಯವಾಗುತ್ತದೆ. ಆಗ ಅದನ್ನು ನೆರವೇರಿಸಿಕೊಳ್ಳಲು ತಾನೇ ತಾನಾಗಿ ಸಾಮರ್ಥ್ಯ ಉಂಟಾಗುತ್ತದೆ. ಗುರಿಯನ್ನು ತಿಳಿದರೆ ಗುರಿಯನ್ನು ತಲುಪಿದಂತೆಯೇ.

"The mark of your ignorance is the depth of your belief in injustice and tragedy. What the caterpillar calls the end of the world, the Master calls the butterfly."

**"ನಿಮ್ಮ ಅಜ್ಞಾನದ ಆಳವನ್ನು ಅಳೆಯಬೇಕಾದರೆ, ಅನ್ಯಾಯ ಹಾಗೂ ದುಃಖದ ಸಂಗತಿಗಳ ಬಗ್ಗೆ ನಿಮಗಿರುವ ಅಭಿಪ್ರಾಯವೇ ಅದಕ್ಕೆ ಅಳತೆ ಕೋಲು. ಕಂಬಳಿ ಹುಳು ಇದೇ ಪ್ರಪಂಚದ ಕೊನೆ ಎನ್ನುತ್ತದೆ, ಆದರೆ, ಒಬ್ಬ ಮಾಸ್ಟರ್ ಆ ಕಂಬಳಿ ಹುಳುವನ್ನು ಚಿಟ್ಟೆಯ ಮೊದಲನೆಯ ಹಂತ ಎಂದು ಹೇಳುತ್ತಾನೆ."**

ನಮ್ಮ ಅಜ್ಞಾನವನ್ನು ನಿಜವಾದ, ಪರಿಪೂರ್ಣವಾದ

ಜ್ಞಾನದಿಂದ ಮಾತ್ರ ಅಳಿಸಲು ಸಾಧ್ಯ. ಆತ್ಮಜ್ಞಾನ ಅಂದರೆ ಕರ್ಮದ ಬಗ್ಗೆ ಪೂರ್ತಿ ಅವಗಾಹನೆ. ಯಾವುದನ್ನೂ ಸೃಷ್ಟಿಮಾಡಲಾಗದು. ಯಾವುದನ್ನೂ ನಾಶಮಾಡಲಾಗದು. ಅಂದರೆ, ಪ್ರತಿ ಅಣುವೂ ಬೇರೆ ಬೇರೆ ರೂಪವನ್ನು ಪಡೆಯುತ್ತಿರುತ್ತದೆ, ಅಷ್ಟೆ. ಪ್ರತಿ ಆರಂಭವೂ ಕೊನೆಗೊಳ್ಳುತ್ತದೆ. ಪ್ರತಿ ಅಂತ್ಯವೂ ಆರಂಭವಾಗುತ್ತದೆ. ಕೆಲವೇ ದೃಷ್ಟಿಕೋನಗಳಿಗೆ ಸೀಮಿತಗೊಂಡಿರುವ ನಮ್ಮ ಅರಿವು ಅನಂತಾನಂತ ದೃಷ್ಟಿಕೋನಗಳನ್ನೊಳಗೊಂಡೇ ವಿಶ್ವದೆಡೆಗೆ ನಾವು ಚಲಿಸಬೇಕು. ಆಗ ಈ ಪ್ರಪಂಚದಲ್ಲಿ ಪ್ರತಿಯೊಂದು ಚಿಕ್ಕ ಅಣುವಿನ, ಪ್ರತಿ ಕಣದ ಇರುವಿಕೆಯ ಹಿಂದಿರುವ ರಹಸ್ಯ ಗೊತ್ತಾಗುತ್ತದೆ.

"You teach best what you most need to learn."

**"ನೀವು ಯಾವುದನ್ನು ಇನ್ನೂ ಹೆಚ್ಚು ಕಲಿಯಬೇಕೆಂದು ಬಯಸುವಿರೋ, ಅದನ್ನೇ ನೀವು ಹೆಚ್ಚು ಹೆಚ್ಚಾಗಿ ಇತರರಿಗೆ ಹೇಳಿಕೊಡಬೇಕು, ಕಲಿಸಿಕೊಡಬೇಕು."**

ಯಾವುದೇ ರಂಗದಲ್ಲಿ ನೀವು ಉನ್ನತಿಯನ್ನು ಸಾಧಿಸಬೇಕೆಂದಲ್ಲಿ, ಆ ರಂಗದಲ್ಲಿ ಯಾವುದೇ ವಿಷಯವನ್ನು ಕಲಿತರೂ ಕೂಡಲೇ ಇತರರೊಂದಿಗೆ ಹಂಚಿಕೊಳ್ಳಬೇಕು. ಆಗ ಆ ಪ್ರತ್ಯೇಕ ರಂಗದಲ್ಲಿ ನಮ್ಮ ಹಿಡಿತ ಹಾಗೂ ಮಿಡಿತ ಸಧೃಢವಾಗುತ್ತದೆ. ಹೆಚ್ಚು ಹೆಚ್ಚು ಶಕ್ತಿಯು ಅದರ ಕಡೆಗೆ ಹರಿಯಲು ಪ್ರಾರಂಭಿಸುತ್ತದೆ. ಆಗ ನಮಗೆ ಇನ್ನೂ ಹೆಚ್ಚು ಹೆಚ್ಚು ಮಾಹಿತಿ ಸಿಗಲಾರಂಭಿಸುತ್ತದೆ. ಆಧ್ಯಾತ್ಮಿಕ ವಿಜ್ಞಾನ ಎಲ್ಲ ಶಾಸ್ತ್ರಗಳಿಗೂ ತಾಯಿ ಇದ್ದಂತೆ. ಆದ್ದರಿಂದ, ನಮ್ಮ ಗುರಿಯನ್ನು ಆಧ್ಯಾತ್ಮೀಕರಿಸೋಣ. 5 ವರ್ಷ ವಯಸ್ಸಿನಿಂದಲೇ ಧ್ಯಾನಕ್ಕೆ ಪ್ರೋತ್ಸಾಹಿಸಿ ಅವರ ಆಧ್ಯಾತ್ಮಿಕ ಬೆಳವಣಿಗೆಗೆ ಸಹಾಯ ಮಾಡಬೇಕು. ಉತ್ತಮವಾದುದನ್ನು ನಿಮಗೆ ತಿಳಿದಂತೆ ಉತ್ತಮ ಮಟ್ಟದಲ್ಲಿ ಕಲಿಸಿಕೊಡಬೇಕು.

ರಿಚರ್ಡ್ ಬಾಕ್ ಮಾಸ್ಟರ್‌ಗೆ ಹಾಗೂ ಅವರ ನುಡಿ ಮುತ್ತುಗಳಿಗೆ ಅನಂತಾನಂತ ವಂದನೆಗಳು. ಅವರ ಅಮೃತ ವಾಕ್ಯಗಳು ನಮ್ಮ ಬಾಳಿನಲ್ಲಿ ಆತ್ಮಜ್ಞಾನವನ್ನು ಪ್ರಸಾದಿಸಿದೆ. ಇದೇ ಸತ್ಯ.

**-ಪಿ.ಅಯ್ಯಪ್ಪ,ಬೆಂಗಳೂರು**
**ಕನ್ನಡಕ್ಕೆ : ಬಿ.ಶ್ರೀನಿವಾಸ, ಬೆಂಗಳೂರು**

## ರಾಯಚೂರಿನಲ್ಲಿ ಧ್ಯಾನ ಸಂಭ್ರಮೋತ್ಸವ

2008 ನವಂಬರ್ 7ನೇ ತಾರೀಖು ಬ್ರಹ್ಮರ್ಷಿ ಪತ್ರೀಜಿಯವರು ರಾಯಚೂರಿನಲ್ಲಿರುವ ರಂಗಮಂದಿರದಲ್ಲಿ ವಿಜಯಲಕ್ಷ್ಮಿ ಪಿರಮಿಡ್ ಮೆಡಿಟೇಷನ್ ಟೀಚಿಂಗ್ ಸೆಂಟರ್ ಫಾರ್ ಯಂಗ್ ಮಾಸ್ಟರ್ಸ್ ಉದ್ಘಾಟನೆ ಮಾಡಿದರು. 2009 ನವಂಬರ್ 7 ರಂದು ಸಂಜೆ 7 ಗಂಟೆಗೆ ಶ್ರೀ ಗುಡುಗಂಟಿ ರಾಮಚಂದ್ರಶೆಟ್ಟಿ ಅವರ ಮನೆಯಲ್ಲಿ ಈ ಸೆಂಟರ್‌ನ ಎಲ್ಲಾ ಸದಸ್ಯರು ಮತ್ತು ಮಕ್ಕಳು ಭಾಗವಹಿಸಿ, ಮಕ್ಕಳ ವಿಭಾಗದ ಮೊದಲನೇ ವಾರ್ಷಿಕೋತ್ಸವವನ್ನು ಅದ್ದೂರಿಯಿಂದ ಆಚರಿಸಿದರು.



**ಸದಸ್ಯರು, ಪಿರಮಿಡ್ ಸ್ಪಿರಿಚ್ಯುವಲ್ ಸೊಸೈಟಿ, ರಾಯಚೂರು.**

## "ಗುಲಬರ್ಗಾ, ಮಹಾಲಕ್ಷ್ಮೀ ಲೇಔಟ್‌ನಲ್ಲಿ ಮಂಡಲಧ್ಯಾನ ಕಾರ್ಯಕ್ರಮ"

ಮಂಡಲ ಧ್ಯಾನ ಕಾರ್ಯಕ್ರಮ ದಿನಾಂಕ 8-11-2009 ರಂದು 12 ಗಂಟೆಗೆ ಅತ್ಯಂತ ವಿಜೃಂಭಣೆಯಿಂದ ಮಹಾಲಕ್ಷ್ಮೀ ಲೇಔಟ್ ಶ್ರೀಮತಿ ಜ್ಯೋತಿ ಶರಣು ಕೋಣಿನ್ ಅವರ ಮನೆಯಲ್ಲಿ ಪ್ರಾರಂಭವಾಯಿತು . ಪಿರಮಿಡ್ ಧ್ಯಾನಿಗಳಾದ ಶ್ರೀ ವಿಜಯಕುಮಾರ್ ಚಿಮಕೋಡ ವಿಶ್ರಾಂತ ಪ್ರಾಚಾರ್ಯರು ಮಂಡಲ ಧ್ಯಾನ ಕಾರ್ಯಕ್ರಮದ ಉದ್ಘಾಟನೆಯನ್ನು ಮಾಡಿದರು. ಪ್ರೊ ಭುವನೇಶ್ವರಿ ಚಿಮಕೋಡರು ಧ್ಯಾನದ ಮಹತ್ವ , ಅದರಿಂದಾಗುವ ಲಾಭದ ಬಗ್ಗೆ ಮನಮುಟ್ಟುವಂತೆ ಹೇಳಿಕೊಟ್ಟರು.

ವಿಶೇಷ ಉಪನ್ಯಾಸಕರಾಗಿ ಧ್ಯಾನಿಗಳಾದ ಶ್ರೀ ಬಿ.ಶಿವರಾಮಪ್ಪ ಕರ್ನಾಟಕ ರಾಜ್ಯ ಪಿರಮಿಡ್ ಧ್ಯಾನ ಪ್ರಚಾರ ಟ್ರಸ್ಟ್‌ನ ಕಾರ್ಯದರ್ಶಿಗಳು, ಬೆಂಗಳೂರು, ಮುಖ್ಯ ಅತಿಥಿಗಳಾಗಿ ತಮ್ಮ 12 ವರ್ಷಗಳ ಧ್ಯಾನ ಅನುಭವವನ್ನು ಹಂಚಿಕೊಂಡರು. ಶ್ರೀಮತಿ ಅಕ್ಕಮಹಾದೇವಿ ಅಂಬೇಡ್ಕರ್ ಕಾಲೇಜಿನ ಉಪನ್ಯಾಸಕರು, ಶ್ರೀಮತಿ ಶಶಿಕಲ ಬಿರಾದಾರ್, ಶ್ರೀಮತಿ ಶಾರದಾ ಶಾಮರಾವ್ ಕುಲಕರ್ಣಿ,ಶ್ರೀಮತಿ ಸುಜಾತ ಕುಲಕರ್ಣಿ ಹಾಗೂ ಇನ್ನಿತರರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದರು.



**-ವಿಜಯಕುಮಾರ್ ಚಿಮಕೋಡ,ಗುಲಬರ್ಗಾ**

# ಫಲಾಹಾರಿಗಳಾಗಿರಿ - ವೇರಾ ಸ್ಟಾನ್‌ಲೇ ಆಲ್ಡರ್

   

ಹಣ್ಣುಗಳು ದೇಹವನ್ನು ಶುಚಿಗೊಳಿಸುತ್ತವೆ ಮತ್ತು ಪುನರುಜ್ಜೀವನಗೊಳಿಸುತ್ತವೆ. ಹಣ್ಣುಗಳನ್ನು ಆಹಾರವನ್ನಾಗಿ ಸೇವಿಸುವುದರಿಂದ ವಯೋಸಹಜವಾಗಿ ದೇಹವು ಕೃಶವಾಗುವುದನ್ನು ಸಾಕಷ್ಟು ತಡೆಗಟ್ಟಬಹುದು.

ಹಣ್ಣುಗಳು ಮತ್ತು ಒಣಬೀಜಗಳು, ಸಾಕಷ್ಟು , ಮಾನಸಿಕವಾದ ಮತ್ತು ದೈಹಿಕವಾದ ಪುಷ್ಟಿಯನ್ನು ನೀಡುತ್ತವೆ! ಇಂತಹ ಹೊಸ ಆಹಾರ ಪದ್ಧತಿಯಿಂದಾಗಿ, ಹೊಸ ಸಂತೃಪ್ತಿ ದೊರೆಯುತ್ತದೆ. ಅಲ್ಲದೆ, ಆಹಾರ ಸೇವನೆಯ ಪ್ರಮಾಣವು ಅತ್ಯಂತ ಕಡಮೆಯಾಗುತ್ತದೆ.

ಮಾನವನಿಂದ ಪ್ರಾಣಿಗಳ ವಧೆ ನಿಲ್ಲುತ್ತದೆ. ಅವನತಿಯ ಅಂಚಿನಲ್ಲಿರುವ ಪ್ರಾಣಿಗಳನ್ನು ಅವುಗಳ ಪಾಡಿಗೆ ಬಿಟ್ಟುಬಿಡಬಹುದು. ಇದರಿಂದಾಗಿ, ಅವುಗಳ ಸಂತತಿ ಹೆಚ್ಚಾಗುತ್ತದೆ. ಮನುಷ್ಯನು ಪ್ರಾಣಿಗಳನ್ನು ಬಲಿತೆಗೆದುಕೊಳ್ಳುವುದು ಮತ್ತು ಪ್ರಾಣಿಗಳು ಮನುಷ್ಯರನ್ನು ಬಲಿತೆಗೆದುಕೊಳ್ಳುವುದು ನಿಲ್ಲುತ್ತದೆ.

ಮರಗಳು ಮತ್ತು ಗಿಡಗಂಟಿಗಳಿಂದ ಮನುಷ್ಯನು ತನ್ನ ಎಲ್ಲಾ ಅವಶ್ಯಕತೆಗಳನ್ನು ಪೂರೈಸಿಕೊಳ್ಳಬಹುದು. ಕಟ್ಟಡ ಕಟ್ಟಲು ಮರಮುಟ್ಟುಗಳು, ಹತ್ತಿ, ಕಾಗದ, ರಬ್ಬರ್, ಔಷಧಿಗಳು, ಬಟ್ಟೆ ಮತ್ತು ಇತರ ಎಲ್ಲಾ ರೀತಿಯ ಆಹಾರ ಪದಾರ್ಥಗಳನ್ನು ಮರಗಳು ಮತ್ತು ಗಿಡಗಂಟಿಗಳು ಮನುಷ್ಯನಿಗೆ ಒದಗಿಸುತ್ತವೆ. ಈ ರೀತಿಯಲ್ಲಿ ಜೀವಿಸುವುದರಿಂದ ಮಾನವನು ತನ್ನ ಮೂರ್ಖತನವನ್ನು, ಕ್ರೂರತ್ವವನ್ನು ಬಿಟ್ಟು ಎಲ್ಲವೂ ತನಗೇ ಬೇಕು ಎಂಬ ಹಂಬಲದಿಂದ ಹೊರಬರಬಹುದು; ಯುದ್ಧ ಮತ್ತು ರೋಗಗಳು ಎಂದಿಗೂ ಬಾರವು.

ಹಿಟ್ಲರ್ ಒಬ್ಬ ಸಸ್ಯಾಹಾರಿಯಾಗಿದ್ದ ಎಂಬುದು ನಾವೆಲ್ಲರೂ ಸಹ ಬಲ್ಲೆವು. ಆದರೆ, ಅದರಿಂದ ಜಗತ್ತಿಗೆ ಯಾವುದೇ ಉಪಯೋಗವಾಗಲಿಲ್ಲ. ಇಲ್ಲ, ಮೊಟ್ಟಮೊದಲು, ಮನುಕುಲವು ತನ್ನ ಪ್ರಸ್ತುತ ಜೀವನ ಶೈಲಿಯಿಂದಲೇ ತಾನು ಪ್ರತಿಕ್ರಿಯೆಯನ್ನು ಪಡೆದುಕೊಳ್ಳುವುದು ಅತ್ಯವಶ್ಯಕ. ನಂತರವಷ್ಟೇ, ಕೊನೆಯದಾಗಿ, ಆಧ್ಯಾತ್ಮಿಕವಾಗಿ ನಿಜವಾಗಿಯೂ ಸಹ ಪ್ರಾಮಾಣಿಕವಾಗಿರಲು ಪ್ರಯತ್ನಿಸಬಹುದು. ಇದರ ಅರ್ಥ ಏನೆಂದರೆ, ನಾವು ಕೆಲವು ಆದೇಶಗಳನ್ನು ಪಾಲಿಸಬೇಕು:

''ನೀವು ಕೊಲ್ಲಬಾರದು'' - ಅಂದರೆ, ಯುದ್ಧಗಳು ಇಲ್ಲ ಮತ್ತು ಮಾಂಸವೂ ಇಲ್ಲ. ''ನಿಮ್ಮನ್ನು ನೀವು ಪ್ರೀತಿಸುವಂತೆಯೇ, ನಿಮ್ಮ ನೆರೆಹೊರೆಯವರನ್ನೂ ಸಹ ಪ್ರೀತಿಸಬೇಕು.''

**-ಕನ್ನಡಕ್ಕೆ: ಎ.ಸತ್ಯನಾರಾಯಣ**

**(ಈ ಲೇಖನ ಭಾಗವನ್ನು, ವೇರಾ ಸ್ಟಾನ್‌ಲೇ ಆಲ್ಡರ್ ವಿರಚಿತ ಮತ್ತು ಸ್ಯಾಮ್ಯುಯಲ್ ವೈಸರ್ ಇಂಕ್, ಇವರು ಪ್ರಕಟಿಸಿರುವ, ''ಫ್ರಂ ದಿ ಮುಂಡಾನೆ ಟು ದಿ ಮ್ಯಾಗ್ನಿಫಿಸಿಯೆಂಟ್'' ಎಂಬ ಪುಸ್ತಕದಿಂದ ಕೃತಜ್ಞತಾಪೂರ್ವಕವಾಗಿ ಆಯ್ದುಕೊಳ್ಳಲಾಗಿದೆ)**



# ಪಿರಮಿಡ್ ಪವರ್

ಪಿರಮಿಡ್ ಶಕ್ತಿ ಎಂದರೆ ಒಂದು ರೀತಿಯ ಅಲೌಕಿಕ ಅಥವಾ ಅತಿರೇಕದ ಗುಣಗಳುಳ್ಳ ಈಜಿಪ್ಟ್‌ನ ಪಿರಮಿಡ್‌ಗಳನ್ನು ಹಾಗೂ ಪಿರಮಿಡ್ ಆಕಾರದಲ್ಲಿರುವ ವಸ್ತುಗಳನ್ನು ಸೂಚಿಸುತ್ತದೆ.

ಯಾವುದೇ ಪಿರಮಿಡ್‌ನ್ನು ಸೂಕ್ತ ರೀತಿಯಲ್ಲಿ, ನಿಗದಿಪಡಿಸಿದಂತೆ ನಿರ್ಮಿಸಿದಾಗ, ಈಜಿಪ್ಟ್‌ನಲ್ಲಿರುವ ನಿಜವಾದ ಮಹಾ ಪಿರಮಿಡ್‌ನ ಗುಣಲಕ್ಷಣಗಳನ್ನು ಅದು ಪಡೆದುಕೊಳ್ಳುತ್ತದೆ.

1. ಗೀಜಾದಲ್ಲಿನ ಖೋಫೋ ಪಿರಮಿಡ್‌ನಂತೆಯೇ ಎತ್ತರದಲ್ಲೂ ಹಾಗೂ ಸುತ್ತಳತೆಯಲ್ಲೂ ಪ್ರಮಾಣಬದ್ಧವಾಗಿ ಇದ್ದಲ್ಲಿ, ಮಾನವ ನಿರ್ಮಿತ ಪಿರಮಿಡ್‌ಗೂ ಕೂಡಾ ಗೀಜಾದ ಪಿರಮಿಡ್ ಗುಣಲಕ್ಷಣಗಳೇ ಇರುತ್ತವೆ.
2. ನಮ್ಮ ಭೂಗೋಳದ ಉತ್ತರ ಹಾಗೂ ದಕ್ಷಿಣ ದಿಕ್ಕುಗಳಿಗೆ ಸಮಾನಾತರವಾಗಿ ಪಿರಮಿಡ್‌ನ್ನು ಇರಿಸಬೇಕು.
3. ಪಿರಮಿಡ್‌ನ್ನು ತಯಾರಿಸುವ ಯಾವುದೇ ಪದಾರ್ಥವು ಅವಾಹಕ ಅಂದರೆ ಉಷ್ಣ ಅಥವಾ ವಿದ್ಯುತ್ ಪ್ರವಾಹವನ್ನು ಪ್ರತಿಬಂಧಿಸುವ (Non-Conductor) ಹಾಗಿರಬೇಕು.

ಪಿರಮಿಡ್‌ನ ವಿಚಿತ್ರವಾದ ಗುಣಲಕ್ಷಣಗಳು ಯಾವುವು ಹಾಗೂ ಅದರಿಂದ ಯಾವ ರೀತಿಯ ಪ್ರಭಾವಗಳು ಉಂಟಾಗುತ್ತವೆಂದು ಈಗ ನೋಡೋಣ:

- ನಾಣ್ಯಗಳು ಹಾಗೂ ಆಭರಣಗಳನ್ನು ಇದರ ಕೆಳಗೆ ಇಟ್ಟರೆ, ಸ್ವಲ್ಪ ಕಾಲದ ನಂತರ ಅವು ಹೊಸದರಂತೆ ಹೊಳೆಯುತ್ತವೆ.
- ಉಕ್ಕಿನ ಪದಾರ್ಥಗಳನ್ನು ಹಾಗೂ ನಾವು ಶೇವ್ ಮಾಡಿಕೊಳ್ಳುವ ರೇಜರ್‌ನ್ನು ಪಿರಮಿಡ್ ಕೆಳಗೆ ಇಟ್ಟರೆ ಮತ್ತೆ ಹೊಸದರಂತೆ ಹರಿತವಾಗುವುದಲ್ಲದೆ ಅದನ್ನು ಸುಮಾರು 50 ರಿಂದ 200 ಬಾರಿ ಉಪಯೋಗಿಸಬಹುದು, ಹೀಗೆ ಮಾಡುವ ಸಲುವಾಗಿ, ಪಿರಮಿಡ್ ಒಳಗೆ ರೇಜರ್‌ನ್ನು (Razor) ಹಾಗೂ ಪಿರಮಿಡ್‌ನ್ನು ಉತ್ತರ ಹಾಗೂ ದಕ್ಷಿಣ ದಿಕ್ಕುಗಳಿಗೆ ಸಮಾನಾಂತರವಾಗಿ ಇಡಬೇಕು.
- ಪಿರಮಿಡ್ ಒಳಗೆ ಇಟ್ಟ ಹಾಲು ಎಂದಿಗೂ ಹಾಳಾಗದು, ಹೆಚ್ಚೆಂದರೆ ಅದು ಮೊಸರಾಗಬಹುದಷ್ಟೆ.
- ಹೂವುಗಳು ದೀರ್ಘಕಾಲ ತಮ್ಮ ತಾಜಾತನವನ್ನು ಉಳಿಸಿಕೊಳುತ್ತವೆ. ಅವು ಒಣಗಿದರೂ ಕೂಡಾ ಬಣ್ಣ ಹಾಗೂ ಆಕಾರ ಬದಲಾಗದು.
- ಗಿಡಗಳ ಬೆಳವಣಿಗೆ ಅತಿ ವೇಗವಾಗಿರುತ್ತದೆ ಹಾಗೂ ಆರೋಗ್ಯ ವಾಗಿರುತ್ತದೆ.
- ಅಶುದ್ಧ ನೀರನ್ನು ಪಿರಮಿಡ್ ಒಳಗೆ ಕೆಲವು ಕಾಲ ಇಡುವುದರಿಂದ ಅದು ತಿಳಿಯಾಗಿ ಶುದ್ಧವಾಗುತ್ತದೆ.
- ಪಿರಮಿಡ್ ಒಳಗೆ ಕಾಲ ಕಳೆಯುವುದರಿಂದ, ಹಲ್ಲುನೋವು, ತಲೆನೋವು ಹಾಗೂ ಕೀಲುನೋವು - ಇವುಗಳು ಕ್ರಮೇಣ ಗುಣವಾಗುತ್ತದೆ. ಇದು ಗಾಯಗಳನ್ನು ವಾಸಿಮಾಡುತ್ತದೆ. ಮಂಚ ಹಾಗೂ ಕುರ್ಚಿಯ ಬಳಿ ಈ ಪಿರಮಿಡ್‌ಗಳನ್ನು ಇಡುವದರಿಂದ ಆರೋಗ್ಯ ವೃದ್ಧಿಯಾಗುತ್ತದೆ.

2 ಮೀಟರ್ ಉದ್ದದ ಪಿರಮಿಡ್‌ಗಳು ಧ್ಯಾನಮಾಡುವ ಸಲುವಾಗಿ ಲಭ್ಯವಿದೆ. ಅದರೊಳಗೆ ಕುಳಿತರೆ ಬಹುಬೇಗ ಆರಾಮಾಗುತ್ತದೆ ಹಾಗೂ ಅಲೌಕಿಕ ಶಕ್ತಿಗಳಲ್ಲಿ ಬೆಳೆಯುತ್ತವೆ ಉದಾ: ಟೆಲಿಪತಿ.

ಪಿರಮಿಡ್ ಕೆಳಗೆ ಇಟ್ಟ ನೀರು ಹಾಗೂ ಬೇರೆ ನೀರನ್ನು ಗಮನಿಸಿದರೆ ಅದರ ವ್ಯತ್ಯಾಸ ತಿಳಿಯುತ್ತದೆ, ರಾಸಾಯನಿಕವಾಗಿ ಬದಲಾವಣೆ ಇಲ್ಲದಿದ್ದರೂ, ಪಿರಮಿಡ್‌ನಿಂದ ಉಂಟಾದ ಒಳ್ಳೆಯ ಲಕ್ಷಣಗಳನ್ನು ಸುಮಾರು 24 ಘಂಟೆಗಳ ಕಾಲ ತನ್ನಲ್ಲೇ ಉಳಿಸಿಕೊಂಡಿರುತ್ತದೆ.

- ಪಿರಮಿಡ್ ನೀರು ನಮಗೆ ಆರೋಗ್ಯ ನೀಡುತ್ತದೆ.
- ಪಿರಮಿಡ್ ನೀರನ್ನು ಗಾಯಗಳಿಗೆ ಹಾಕಿದರೆ ಬೇಗ ವಾಸಿಯಾಗುತ್ತೆ.
- ಗಿಡಗಳು ಬೇಗ ಬೆಳೆಯುತ್ತವೆ.
- ಇದರಿಂದ ಮುಖ ತೊಳೆದರೆ ಚರ್ಮ ಕಾಂತಿಮಯವಾಗುವುದು.

ಒಂದು ಭಾಗ ಪಿರಮಿಡ್ ನೀರು ಹಾಗೂ 2 ಭಾಗ ಸಾಧಾರಣ ನೀರನ್ನು ಬೆರೆಸಿದರೂ ಈ ಮೇಲ್ಕಂಡ

ಉಪಯೋಗಗಳನ್ನು ಪಡೆಯಬಹುದು.

**ಪಿರಮಿಡ್‌ನ್ನು ಹೇಗೆ ತಯಾರಿಸುವುದು?**

ಪಿರಮಿಡ್‌ಗೆ ನಾಲ್ಕು ತ್ರಿಕೋಣಾಕಾರದ ಮುಖಗಳಿವೆ. ಅವು ಚೌಕಟ್ಟಾದ ತಳಹದಿಯ ಮೇಲೆ ಗೋಪುರದಂತೆ ನಿಂತಿರುತ್ತದೆ. 4 ತ್ರಿಕೋಣಗಳನ್ನು ಸಮನಾಗಿ ಮಾಡಿ ಅದರ ಅಂಚುಗಳನ್ನು ಜೋಡಿಸಿದರೆ ಪಿರಮಿಡ್ ಆಗುತ್ತದೆ.



ಇನ್ನೊಂದು ರೀತಿಯಲ್ಲಿ, ಕಾಂಪಾಸ್‌ನಿಂದ (Compass) ಒಂದು Circle ಮಾಡಬೇಕು. ಅದರೊಳಗೆ ಸಮನಾದ ನಾಲ್ಕು ಗೆರೆಗಳ ಮೂಲಕ ಚೌಕಟ್ಟು (Square) ಬಿಡಿಸಬೇಕು. ಪ್ರತಿ ಗೆರೆಗೂ ಊರ್ಧ್ವವಾಗಿ ಎರಡೆರಡು ಸಮನಾದ ಗೆರೆಗಳನ್ನು ಎಳೆದು ಜೋಡಿಸಿರಿ.

**ಪಿರಮಿಡ್‌ನ ಮಧ್ಯ ಬಿಂದು:**

ಪಿರಮಿಡ್ ಒಳಗೆ ಅದರ ಕೇಂದ್ರ ಬಿಂದುವಿನಲ್ಲಿ ಅದರ ಶಕ್ತಿ ಸಾಮರ್ಥ್ಯಗಳು ಅಡಗಿವೆ. ತಳದಿಂದ ಮಧ್ಯ ಭಾಗದಲ್ಲಿ 1/3ರಷ್ಟು ಎತ್ತರದಲ್ಲಿ ಇದರ ಪೂರ್ಣ ಶಕ್ತಿಯ ಕೇಂದ್ರವಾಗಿದೆ.

ಉದಾ: ಪಿರಮಿಡ್‌ನ ಎತ್ತರ 8cm... ಇದ್ದಲ್ಲಿ, ಕೇಂದ್ರ ಬಿಂದುವು 2.6cm ಎತ್ತರದಲ್ಲಿ, ಪಿರಮಿಡ್‌ನ ಒಳಗಿನ ಮಧ್ಯ ಭಾಗದಲ್ಲಿ ಎಂದರ್ಥ.

**ಹೇಗೆ ಇದನ್ನು ಕಂಡು ಹಿಡಿಯುವುದು?**

ಯಾವುದಾದರೊಂದು 20-30cm ದಾರಕ್ಕೆ ಚಿಕ್ಕದೊಂದು ಗಾಜಿನ ಅಥವಾ ಲೋಹದ ಪದಾರ್ಥವನ್ನು ಕಟ್ಟಿರಿ. ಅದನ್ನು ಪಿರಮಿಡ್‌ನ ತುದಿಯಿಂದ ಒಳಕ್ಕೆ ಬಿಡಿ. ಆ ದಾರವನ್ನು ಪಿರಮಿಡ್ ಮಧ್ಯ ಭಾಗದಲ್ಲಿ ಮೇಲೆ ಕೆಳಗೆ ಮೆಲ್ಲಗೆ ಸರಿಸಿರಿ. ಒಂದು ಪ್ರತ್ಯೇಕ ಹಂತದಲ್ಲಿ ಆ Pendulum ತನಗೆ ತಾನೇ ಆಚೆ ಈಚೆ ತೂಗಲು ಪ್ರಾರಂಭಿಸುತ್ತದೆ. ಇದರಿಂದ ಆ ಕೇಂದ್ರ ಬಿಂದುವಿನ, ಅದರ ಶಕ್ತಿಯ ಪರಿಚಯ ನಮಗಾಗುತ್ತದೆ. ಈಗ ಕ್ರಮೇಣ ದಾರವನ್ನು ಕೆಳಗೆ ಬಿಡುತ್ತಾ ಬಂದಾಗ, ದಾರದ ತೂಗಾಟ ಪಿರಮಿಡ್‌ನ ಆಕಾರಕ್ಕೆ ತಕ್ಕಹಾಗೆ ಇನ್ನೂ ಅಗಲವಾಗಿ ತೂಗಾಡುತ್ತದೆ.

**ಹನಿ ಟೆಸ್ಟ್:**

ಒಂದು ಬಟ್ಟಲಲ್ಲಿ ಜೇನನ್ನು ಶೇಖರಿಸಿ ಪಿರಮಿಡ್‌ನೊಳಗೆ ಕೇಂದ್ರಬಿಂದುವಿನಲ್ಲಿ ಇರಿಸಿ. ಗಮನಿಸಿ ನೋಡಿದಾಗ, ಸ್ವಲ್ಪ ಕಾಲದನಂತರ ಜೇನು ಜಿಗುಟಾಗಿಯೂ ಹಾಗು ಗಟ್ಟಿಯಾಗಿರುತ್ತದೆ. ಅದನ್ನು ಹೊರ ತೆಗೆದ 24 ಘಂಟೆಗಳ ನಂತರ ಪುನಃ ಮೊದಲಿನಂತೆ ನೀರಾಗುತ್ತದೆ.

-ಪಿ.ಅಯ್ಯಪ್ಪ, ಬೆಂಗಳೂರು
ಕನ್ನಡಕ್ಕೆ : ಬಿ.ಶ್ರೀನಿವಾಸ, ಬೆಂಗಳೂರು

## ತ್ರಿವಿಧ ಆನಂದಗಳು



**ಮೂರು ರೀತಿಯ ಆನಂದಗಳಿವೆ**

- ವಿಷಯಾನಂದ
- ಭಜನಾನಂದ
- ಬ್ರಹ್ಮಾನಂದ



**ನಮ್ಮ ಜೀವನ ಇರುವುದು**

- ಅನ್ನಮಯ ಕೋಶದ ಮೂಲಕ ವಿಷಯಾನಂದಕ್ಕಾಗಿ
- ಮನೋಮಯಕೋಶದ ಮೂಲಕ ಭಜನಾನಂದಕ್ಕಾಗಿ
- ವಿಜ್ಞಾನಮಯಕೋಶ, ಆನಂದಮಯ ಕೋಶಗಳ ಮೂಲಕ ಬ್ರಹ್ಮಾನಂದಕ್ಕಾಗಿ

-ತುಳಸೀದಳ ಪುಸ್ತಕದಿಂದ



## ನನಗೆ ಒಳ್ಳೆಯ ಕಾಲೇಜ್‌ನಲ್ಲಿ ಇಂಜಿನಿಯರಿಂಗ್ ಸೀಟ್ ಸಿಕಿತ್ತು

ನನ್ನ ಹೆಸರು ಜೆ.ಆಶ. ನನ್ನ ಊರು ಬೆಂಗಳೂರು. ನನ್ನ ತಂದೆ ಪ್ರಭಾಕರ್ ನಾಯ್ಡು, ತಾಯಿ ಸುಜಾತ. ನಾನು ಯಾವುದನ್ನೂ ನಂಬುತ್ತಿರಲಿಲ್ಲ. ನಾನು ಎರಡನೆಯ ವರ್ಷದ PUC ಯಲ್ಲಿದ್ದಾಗ, ನಾನು ಚೆನ್ನಾಗಿ ಓದುತ್ತಿದ್ದರೂ ಸಹ, ನನಗೆ ಅಂಕಗಳು ಸರಿಯಾಗಿ ಬರುತ್ತಿರಲಿಲ್ಲ, ನನಗೆ ತುಂಬಾ ಬೇಸರವಾಗುತ್ತಿತ್ತು ಜೊತೆಗೆ ಭಯವೂ ಆಗುತ್ತಿತ್ತು. ಏಕೆಂದರೆ, ಈ ರೀತಿಯಾದ ಅಂಕಗಳಿಂದ ನನಗೆ ಮುಂದೆ ಇಂಜಿನಿಯರಿಂಗ್ ಸೀಟ್ ಸಿಗುತ್ತೋ ಇಲ್ಲವೋ ಎಂಬ ಆತಂಕ. ಇದರಿಂದಾಗಿ ನಾನು ಬಹಳ ಚಿಂತೆಗೆ ಒಳಗಾಗಿದೆ. ಆ ಸಮಯದಲ್ಲಿ ನಮ್ಮ ನೆರೆ ಮನೆಯವರು ನನ್ನನ್ನು ನೋಡಿ ನನಗೆ ಪಿರಮಿಡ್ ಧ್ಯಾನದ ಬಗ್ಗೆ ತಿಳಿಸಿ, ನನಗೆ ಒಂದು ಕರಪತ್ರ ಕೊಟ್ಟರು. ಅದನ್ನು ತೆಗೆದುಕೊಂಡು ನಾನು ಹತ್ತಿರದ ಪಿರಮಿಡ್ ಧ್ಯಾನ ಕೇಂದ್ರಕ್ಕೆ ಫೋನ್ ಮಾಡಿ ತಿಳಿದುಕೊಂಡು, 27ನೇ ಏಪ್ರಿಲ್ 2008 ಆದಿನ ನಾನು ಪಿರಮಿಡ್ ಧ್ಯಾನ ಕೇಂದ್ರಕ್ಕೆ ಹೋದೆ. ನಾನು ಹೋದ ಮೊದಲನೆಯ ದಿನವೆ, ಒಬ್ಬ ಗ್ರೇಟ್ ಪಿರಮಿಡ್ ಮಾಸ್ಟರ್ ಪ್ರೇಮ್‌ನಾಥ್ ಗುಪ್ತರವರನ್ನು ಭೇಟಿಯಾದೆ. ಅಂದಿನಿಂದ ಇಂದಿನವರೆಗೂ ಪಿರಮಿಡ್ ಮೆಡಿಟೇಷನ್ ನನ್ನ ಬಾಳಿನ ಅವಿಭಾಜ್ಯ ಅಂಗವಾಗಿಬಿಟ್ಟಿದೆ. ಪ್ರೇಮ್‌ನಾಥ್ ಸರ್ ನನಗೆ ಉತ್ತೇಜನ ನೀಡಿ, ಒಳ್ಳೆಯ Engg College ನಲ್ಲಿ Seat ಸಿಗುತ್ತೆ ಅಂತ ಹೇಳಿದ್ರು. ಅವರು ಹೇಳಿದಂತೆಯ ನನಗೊಂದು ಒಳ್ಳೆಯ ಕಾಲೇಜ್ ನಲ್ಲಿ ಬಹಳ ಒಳ್ಳೆಯ ಬ್ರಾಂಚ್ ನಲ್ಲಿ ಕೋರ್ಸ್ ಮಾಡಲು ಅವಕಾಶ ಸಿಕ್ಕಿದೆ.

ನನ್ನ ಧ್ಯಾನದ ಅನುಭವಗಳನ್ನು ಹೇಳಬಯಸುತ್ತೇನೆ. ನಾನು ಧ್ಯಾನ ಮಾಡಲು ಆರಂಭಿಸಿ ಎರಡು ವರ್ಷ ಆಯಿತು. ಇಲ್ಲಿಯ ತನಕ ಯಾವ ಡಾಕ್ಟರ್ ಬಳಿಯೂ ಹೋಗಲಿಲ್ಲ. ನಾನು ಇದಕ್ಕೆ ಮುಂಚೆ ಮಾಂಸಾಹಾರಿಯಾಗಿದ್ದೆ, ಧ್ಯಾನ ಶುರುಮಾಡಿದ ಮೇಲೂ ಕೂಡಾ ನಾನು ಮನಬಂದಂತೆ ಅದರ ಸೇವನೆ ಮಾಡಿದ್ದೇನೆ. ಆದರೆ, ಒಂದು ದಿನ ಬೆಳಿಗ್ಗೆ 5ಕ್ಕೆ ನಾನು ಧ್ಯಾನ ಮಾಡುತ್ತಿದ್ದಾಗ ಆಸ್ಟ್ರಲ್ ಮಾಸ್ಟರ್ ಒಬ್ಬರು ಬಂದು ನನಗೆ ಮಾಂಸಾಹಾರವನ್ನು ತ್ಯಜಿಸಿಲು ಪಾಠ ಹೇಳಿಕೊಟ್ಟರು. ಅಂದಿನಿಂದ ನಾನು ಅದನ್ನು ಪೂರ್ತಿಯಾಗಿ ಬಿಟ್ಟುಬಿಟ್ಟಿದ್ದೇನೆ. ನಾನು ಈಗ ಶಾಕಾಹಾರಿಯಾಗಿದ್ದೀನೆ. ಧ್ಯಾನದಿಂದ ನನ್ನ ಆತ್ಮವಿಶ್ವಾಸ ಹೆಚ್ಚಾಗಿದೆ. ನಾನು ಎಲ್ಲರೊಡನೆ ಪ್ರೀತಿ ವಿಶ್ವಾಸಗಳಿಂದ ನಡೆದುಕೊಳ್ಳುತ್ತಿದ್ದೇನೆ. ಬಲು ಕಡಿಮೆ ಅವಧಿಯಲ್ಲಿ ನಾನು ಹೆಚ್ಚು ಓದಬಲ್ಲವಳಾಗಿದ್ದೇನೆ. ನನ್ನ ಒಳಗೆ ಅಡಗಿದ್ದ ಪ್ರತಿಭೆ ಹೊರಬಂದಿದೆ. ಈಗ ನಾನು ಭರತನಾಟ್ಯವನ್ನು ಕಲಿಯಲು ಹೋಗುತ್ತಿದ್ದೇನೆ. ಸಮಯ ಸಿಕ್ಕಾಗ ನಾನು ಚಿತ್ರಗಳನ್ನು ಬಿಡಿಸಿ ಅದಕ್ಕೆ ಬಣ್ಣಗಳನ್ನು ತುಂಬಿಸುತ್ತೇನೆ. ಮರ-ಗಿಡಗಳ ಜೊತೆ ನಾನು Telepathy ಯನ್ನು ಮಾಡುತ್ತೇನೆ. ಪ್ರತಿ ಕ್ಷಣವೂ ದೈವೀ ಕ್ಷಣವೆಂಬುದನ್ನು ಅರಿತೆ. ನನ್ನ ಪೂರ್ವ ಜನ್ಮದ ಬಗ್ಗೆ ತಿಳಿದುಕೊಂಡೆ.

ಧ್ಯಾನ ಜಗತ್ತಿಗಾಗಿ ನನ್ನ ಸೇವೆ ನಿಮಿತ್ತ ನಮ್ಮ ಮನೆಯಲ್ಲಿ "ಸಿದ್ಧಾರ್ಥ ಬುದ್ಧ ಪಿರಮಿಡ್ ಸೆಂಟರ್" ಉದ್ಘಾಟನೆಯನ್ನು 2009, ಜೂನ್ 19ರಂದು ಪ್ರೇಮ್ ನಾಥ್ ಸರ್ ರವರಿಂದ ಆಯಿತು. ಅಂದಿನಿಂದ ಪ್ರತಿ ಗುರುವಾರ ಸಾಯಂಕಾಲ ಧ್ಯಾನ ತರಗತಿಗಳನ್ನು ನಡೆಸುತ್ತಿದ್ದೇವೆ.

ನನ್ನ ಪ್ರೋತ್ಸಾಹ ಕೊಟ್ಟು ಮೆಡಿಟೇಷನ್ ಕ್ಲಾಸಸ್ ಗೆ ಸಹಾಯ ಮಾಡುತ್ತಿರುವ ನನ್ನ ತಂದೆ-ತಾಯಿಯರು ಹಾಗೂ ನನ್ನ ಅಣ್ಣ ಅಶೋಕ್ ಗೆ ನನ್ನ ಕೃತಜ್ಞತೆಗಳು. ಪ್ರೇಮ್ ನಾಥ್ ಸರ್, ತಟವರ್ತಿ ವೀರರಾಘವರಾವ್ ಸರ್, ಸುಧಾಕರ್ ಮಾಸ್ಟರ್ ರಾಮಚಂದ್ರನಾಯ್ಡು, ಗೀತರವರು, ಅಯ್ಯಪ್ಪಸಾರ್ ಇವರೆಲ್ಲರಿಗೂ ಹಾಗೂ ನನ್ನನ್ನೂ ಪ್ರೋತ್ಸಾಹಿಸುತ್ತಿರುವ ಎಲ್ಲರಿಗೂ, ನನ್ನ ಈ ಪ್ರಯಾಣದಲ್ಲಿ ಜೊತೆಯಿರುವವರಿಗೂ ನನ್ನ ಹೃತ್ಪೂರ್ವಕ ವಂದನೆಗಳು. ಸುಧಾಕರ್ ಮಾಸ್ಟರ್ ಹಾಗೂ ರಾಮಚಂದ್ರ ಸರ್‌ಗಂತೂ, ಈ ಆಧ್ಯಾತ್ಮಿಕ ಪ್ರಯಾಣದಲ್ಲಿ ಅವರು ನೀಡುತ್ತಿರುವ ಸಹಾಯಕ್ಕಾಗಿ ನಾನು ಸದಾ ಅವರನ್ನು ಅಭಿನಂದಿಸುತ್ತಲೇ ಇರುತ್ತೇನೆ.

---

# ಪಿರಮಿಡ್ ಧ್ಯಾನ ಮತ್ತು ಆಧ್ಯಾತ್ಮಿಕ ಶಿಕ್ಷಣಾಲಯ

ಧ್ಯಾನ ಮತ್ತು ಆಧ್ಯಾತ್ಮಿಕ ವಿಜ್ಞಾನಗಳನ್ನು ಜನಸಾಮಾನ್ಯರಲ್ಲಿ ವ್ಯವಸ್ಥಿತವಾಗಿ, ನಿಯಮಿತವಾಗಿ ಪ್ರಚಾರ ಮತ್ತು ಪ್ರಸಾರಗೊಳಿಸಲು, ಒಂದು ಬೃಹತ್ ಪ್ರಯತ್ನವನ್ನು ಆರಂಭಿಸಲಾಗಿದೆ. ಇದಕ್ಕಾಗಿ, ಒಂದು ಅಕಾಡೆಮಿಯನ್ನು ಸ್ಥಾಪಿಸಲು ಉದ್ದೇಶಿಸಲಾಗಿದೆ. ಇದರ ನೇತೃತ್ವವನ್ನು ಬ್ರಹ್ಮರ್ಷಿ ಪತ್ರೀಜಿಯವರು ವಹಿಸಿಕೊಂಡಿದ್ದಾರೆ. ಪಿರಮಿಡ್ ಅಕಾಡೆಮಿ ಆಫ್ ಸ್ಪಿರಿಚುವಲ್ ಸೈನ್ಸ್ ಎಂಬ ಹೆಸರಿನ ಅಕಾಡೆಮಿಯು ದಿ. 09-11-2009ರಿಂದ ಕಾರ್ಯವನ್ನು ಆರಂಭಿಸಿದೆ.

ಆರಂಭದಲ್ಲಿ ಬೆಂಗಳೂರಿನ ಮೂರು ಕಡೆ ಈ ಅಕಾಡೆಮಿಯು ಪ್ರತ್ಯೇಕ ಇನ್‌ಸ್ಟಿಟ್ಯೂಟ್‌ಗಳನ್ನು ಪ್ರಾರಂಭಿಸಲಾಗಿದೆ. ಇನ್‌ಸ್ಟಿಟ್ಯೂಟ್‌ಗಳನ್ನು 'ಪಿರಮಿಡ್ ಇನ್ಸ್‌ಟಿಟ್ಯೂಟ್ ಆಫ್ ಮೆಡಿಟೇಶನ್ ಅಂಡ್ ಸ್ಪಿರಿಚ್ಯುವಾಲಿಟಿ' ಎಂದು ಹೆಸರಿಸಲಾಗಿದೆ.

ಕೋರ್ಸುಗಳ ವಿಷಯ ಮತ್ತು ಬೋಧನಾ ಸಾಮಗ್ರಿಗಳನ್ನು ವಿನ್ಯಾಸಗೊಂಡು, ಬ್ರಹ್ಮರ್ಷಿ ಪತ್ರೀಜಿಯವರಿಂದ ಅನುಮೋದಿತಗೊಂಡಿವೆ. ಈಗ ಪ್ರಾರಂಭಿಸಲಾಗುತ್ತಿರುವ ಕೋರ್ಸುಗಳು ಸರ್ಟಿಫಿಕೇಟ್ ಕೋರ್ಸುಗಳಾಗಿದ್ದು, ಬೋಧನಾ ವಿಧಾನದಲ್ಲಿ ಕ್ರೆಡಿಟ್ ಸಿಸ್ಟಂ ಅನ್ನು ಅಂದರೆ, ಶ್ರೇಯಾಂಕ ವ್ಯವಸ್ಥೆಯನ್ನು ಅಳವಡಿಸಿಕೊಳ್ಳಲಾಗಿದೆ. ಈ ವ್ಯವಸ್ಥೆಯಲ್ಲಿ ಒಂದು ಶ್ರೇಯಾಂಕಕ್ಕೆ ನಿಗದಿತ ಗಂಟೆಗಳ ಬೋಧನಾ ಅವಧಿಯಂತೆ, ಸೂಚಿತ ಶ್ರೇಯಾಂಕಗಳಷ್ಟು ಬೋಧನಾ ಸಮಯವನ್ನು ನಿಗದಿಗೊಳಿಸಲಾಗಿದೆ. ಪರೀಕ್ಷೆಗಳನ್ನು ನಿಯಮಿತವಾಗಿ ನಡೆಸಿ, ಬ್ರಹ್ಮರ್ಷಿ ಪತ್ರೀಜಿಯವರ ಸಹಿಯೊಂದಿಗೆ, ಪ್ರಮಾಣಪತ್ರಗಳನ್ನು ವಿತರಿಸಲಾಗುವುದು. ಆಧ್ಯಾತ್ಮಿಕ ವಿಜ್ಞಾನಗಳ ಕುರಿತಾಗಿ ಡಿಪ್ಲೊಮಾ ಮತ್ತು ಪದವಿ ಕೋರ್ಸುಗಳನ್ನೂ ಸಹ ಮುಂದಿನ ದಿನಗಳಲ್ಲಿ ಆರಂಭಿಸಲಾಗುವುದು.

**ಅಕಾಡೆಮಿಯು ಈ ಕೆಳಕಂಡ ಕೋರ್ಸುಗಳನ್ನು ಒದಗಿಸುತ್ತದೆ:**

- ಧ್ಯಾನ ವಿಜ್ಞಾನಗಳು, ಪಿರಮಿಡ್ ವಿಜ್ಞಾನಗಳು ಮತ್ತು ಆಧ್ಯಾತ್ಮಿಕ ವಿಜ್ಞಾನಗಳು ಈ ಮೂರೂ ವಿಷಯಗಳಲ್ಲಿ ಅಲ್ಪಾವಧಿಯ ಸರ್ಟಿಫಿಕೇಟ್ ಕೋರ್ಸುಗಳು
- ಆಧ್ಯಾತ್ಮಿಕ ವಿಜ್ಞಾನಗಳಲ್ಲಿ ಡಿಪ್ಲೋಮಾ ಮತ್ತು ಆಧ್ಯಾತ್ಮಿಕ ವಿಜ್ಞಾನಗಳಲ್ಲಿ ಪದವಿ ಈ ಎರಡು ವಿಷಯಗಳ ದೀರ್ಘಾವಧಿ ಕೋರ್ಸುಗಳು.

ವಿವರಣ ಪತ್ರವನ್ನು ಟ್ರಸ್ಟ್ ಕಚೇರಿಯಿಂದ ಪಡೆದುಕೊಳ್ಳಬಹುದು ಮತ್ತು ಭರ್ತಿ ಮಾಡಿದ ಅರ್ಜಿಯನ್ನು ಪಡೆದು ಪ್ರವೇಶ ನೋಂದಣಿಯನ್ನು ಟ್ರಸ್ಟ್ ಕಚೇರಿಯಲ್ಲಿಯೇ ಮಾಡಲಾಗುವುದು.

ಆರಂಭಗೊಳ್ಳುತ್ತಿರುವ ಈ ಕೋರ್ಸುಗಳಿಗೆ ಸೇರುವಂತೆ ವ್ಯಾಪಕ ಪ್ರಚಾರವನ್ನು ಮಾಡಲು ವಿನಂತಿಸಿ ಈ ಮಾಹಿತಿಯನ್ನು ಪ್ರಕಟಿಸಲಾಗಿದೆ. ಹೆಚ್ಚಿನ ಮಾಹಿತಿಗಾಗಿ ಈ ಕೆಳಕಂಡ ವಿಳಾಸಗಳನ್ನು ಮತ್ತು ದೂರವಾಣಿ ಸಂಖ್ಯೆಗಳನ್ನು ಸಂಪರ್ಕಿಸಬಹುದು.

**ಪಿರಮಿಡ್ ಇನ್ಸ್‌ಟಿಟ್ಯೂಟ್ ಆಫ್ ಮೆಡಿಟೇಷನ್ ಅಂಡ್ ಸ್ಪಿರಿಚ್ಯುಯಾಲಿಟಿ**

126, ಪಿರಮಿಡ್ ಭವನ, 2ನೇ ಮಹಡಿ, 7ನೇ ಮುಖ್ಯರಸ್ತೆ,
4ನೇ ಬ್ಲಾಕ್, ಜಯನಗರ, ಬೆಂಗಳೂರು.
ಫೋನ್: 080-26646899, 9449831788.

15/3, ಬಿಆರ್‌ಎಸ್ ಗ್ಲೋಬಲ್ ಸೆಂಟರ್ ಫಾರ್ ಎಕ್ಸೆಲೆನ್ಸ್,
ಕಸವನಹಳ್ಳಿ ಮುಖ್ಯ ರಸ್ತೆ, ಬೆಂಗಳೂರು
ಫೋನ್: 9964097636, 9449831788

ಸಿಎಂಆರ್‌ಎಸ್ ಮೆಡಿಟೇಷನ್ ಸೆಂಟರ್, ಕುಂದಲಹಳ್ಳಿ
ಗೇಟ್, ಬ್ರೂಕ್‌ಫೀಲ್ಡ್, ಬೆಂಗಳೂರು
ಫೋನ್: 9880822545, 9449831788.

- ಕಾರ್ಯದರ್ಶಿ

ಕರ್ನಾಟಕ ಪಿರಮಿಡ್ ಧ್ಯಾನ ಪ್ರಚಾರ ಟ್ರಸ್ಟ್



# ZEN ( ಜೆನ್ - ಈಗಲೇ - ಇಲ್ಲೇ - ಈ ಕ್ಷಣದಲ್ಲೇ )

ಜೆನ್ ಎಂಬುದು ಯಾವುದೇ ಜಾತಿ ಅಥವಾ ಮತಕ್ಕೆ ಸಂಬಂಧಪಟ್ಟ ವಿಷಯವಲ್ಲ, ಇದೊಂದು ಜೀವಿಸುವ ಕಲೆ. ಈ ಕ್ಷಣದಲ್ಲಿ ಜಾಗೃತವಾಗಿ, ಸಾಕ್ಷಿಯಾಗಿ ಬಾಳುವ ಕಲೆ. ನಿರಂತರವಾಗಿ ಸಾಗುತ್ತಿರುವ ಜೀವನದಿಗೆ ಯಾವುದೇ ಅಣೆಕಟ್ಟುಗಳನ್ನು ಕಟ್ಟದೆ ಅದು ಸಂತೋಷದಿಂದ ಸಾಗರವನ್ನು ಸೇರುವಾಗ, ಆ ಸುಂದರ ದೃಶ್ಯವನ್ನು ನೋಡುತ್ತಾ ರಂಜಿಸುವ ರಸಿಕತೆಯೇ ಜೆನ್. ಆ ನದಿಯ ಆಳವನ್ನಾಗಲಿ, ಅದರ ಭೋರ್ಗರೆಯುವ ಜಲಪಾತಗಳನ್ನು ನೋಡಿ ವಿಮರ್ಶಿಸುವುದಾಗಲಿ, ಅಥವಾ ಅದರಿಂದ ನಮಗಾಗುವ ಲಾಭನಷ್ಟಗಳನ್ನು ಪರಿಶೀಲಿಸುವುದು ಇತ್ಯಾದಿ, ಎಲ್ಲ ಮನೋಭಾವನೆಗಳನ್ನು ಪಕ್ಕಕ್ಕೆ ಸರಿಸಿ, ಕೇವಲ ಸಾಕ್ಷಿಯಾಗಿ ಗಮನಿಸುವುದು ಎಂದರ್ಥ.

ನಮ್ಮ ಆಲೋಚನೆಗಳ ಹಾಗೂ ಭಾವನೆಗಳ ನಡುವೆ ಒಂದು ಸಮನ್ವಯವನ್ನುಂಟುಮಾಡಿ, ಒಳಗೂ-ಹೊರಗೂ ವ್ಯವಹರಿಸುವಾಗ ಒಂದು ಬಗೆಯ ಸ್ಥಿರತೆಯನ್ನು ಒದಗಿಸಿ, ಬಾಳಿನ ಸಿಹಿ-ಕಹಿಗಳನ್ನು, ಸುಖ-ದುಃಖಗಳನ್ನು, ಸೋಲು-ಗೆಲುವುಗಳನ್ನು ಸಮವಾಗಿ ದರ್ಶಿಸುವುದೆ ಜೆನ್. ಇದು ನಮ್ಮಲ್ಲಿ ಆಚರಣೆಯಲ್ಲಿರುವ ಯುಗಾದಿ ಹಬ್ಬದ ವೈಶಿಷ್ಟ್ಯವನ್ನು ಪ್ರತಿಬಿಂಬಿಸುತ್ತದೆ, ಅಲ್ಲವೆ?

ಯುನಿವರ್ಸಿಟಿ ಪ್ರೊಫೆಸರ್ ಒಬ್ಬ ಜೆನ್ ಮಾಸ್ಟರ್‌ನ ಬಳಿಗೆ ಹೋದ. ಆ ಮಾಸ್ಟರ್ ನಮ್ಮ ಪ್ರೊಫೆಸರ್‌ಗೆ ಕುಡಿಯಲು ಚಹ ತಂದನು. ಅದನ್ನು ಲೋಟದೊಳಕ್ಕೆ ಸುರಿಯುತ್ತಲಿರುವಾಗ, ಈ ಪ್ರೊಫೆಸರ್ ಜೆನ್ ಬಗ್ಗೆ ಹೇಳಲಾರಂಭಿಸಿದ. ಮಾಸ್ಟರ್ ಲೋಟದ ತುಂಬ ಚಹ ಸುರಿದ ನಂತರವೂ ನಿಲ್ಲಿಸಲೇ ಇಲ್ಲ, ಅದು ತುಂಬಿ ಹೊರಗೆ ಚೆಲ್ಲಿತು. ಆದರೂ ಮಾಸ್ಟರ್ ಚಹ ಸುರಿಯುತ್ತಲೇ ಇದ್ದ. ಇದನ್ನು ನೋಡುತ್ತಿದ್ದ ಪ್ರೊಫೆಸರ್‌ಗೆ ಇನ್ನು ತಡೆಯಲಾಗಲಿಲ್ಲ "ಅರೆ, ನಿಲ್ಲಿಸಿ, ಸಾಕು, ಚಹ ಚೆಲ್ಲಿಹೋಗ್ತಿದೆ. ಆ ಲೋಟದೊಳಗೆ ಜಾಗ ಎಲ್ಲಿದೆ? ಇನ್ನು ಸುರೀತಾನೆ ಇದ್ದೀರಲ್ಲ", ಎಂದನು. ಆಗ ಮಾಸ್ಟರ್ ಮುಗುಳ್ನಕ್ಕು "ನೀನು ಕೂಡಾ ಈ ಲೋಟದಂತೆಯೆ, ಅದರಲ್ಲಿ ಜಾಗ ಖಾಲಿಯಿಲ್ಲ ಅಂದ ಮೇಲೆ, ನಿನಗೆ ಜೆನ್ ಬಗ್ಗೆ ಹೇಗೆ ಹೇಳಿಕೊಡಲಿ." ಜಪಾನಿ ಭಾಷೆಯಲ್ಲಿ ಜೆನ್ ತತ್ವಗಳನ್ನು ಕಥೆಗಳ ಮೂಲಕ ಹೇಳಿಕೊಡಲಾಗುತ್ತದೆ.

ಜೆನ್ ಸಿದ್ಧಾಂತದ ಮೂಲ ಬೌದ್ಧ ಧರ್ಮವೇ ಆಗಿದೆ. ನಮಗೆಲ್ಲ ತಿಳಿದಿರುವ ಹಾಗೆ ಇದು ಭಾರತದಲ್ಲಿಯೇ ಉಗಮವಾದದ್ದು, ನಾವು ಯಾವುದನ್ನು ಧ್ಯಾನ ಎಂದು ಕರೆಯುತ್ತೇವೆಯೋ, ಚೀನೀಯರು ಜ್ಯಾನ್(ZAN) ಎಂದು ಉಚ್ಚರಿಸುತ್ತಾರೆ, ಅದನ್ನೇ ಜಪಾನ್‌ನಲ್ಲಿ ಜೆನ್(ZEN)ಎನ್ನುತ್ತಾರೆ. ಜೆನ್ ಪೂರ್ತಿಯಾಗಿ ವಿಕಾಸ ಹೊಂದಿದ್ದು ಜಪಾನ್‌ನಲ್ಲಿ, ಆದ್ದರಿಂದಲೇ, ನಾವು ಕಾಣುವಂತೆ, ಜಪಾನೀಯರು ಬಹಳ ಕ್ರಿಯಾಶೀಲರು ಹಾಗೂ ಬುದ್ಧಿವಂತರು. ನಾವೆಲ್ಲರೂ ಕೇಳಿರುವಹಾಗೆ, ಅವರಲ್ಲಿ ಯೋಧರಿಗೆ "ಸಮೂರಾಯ್" ಎಂದು ಕರೆಯುತ್ತಾರೆ. ಹಾಗೆಂದರೆ, ಸದಾ ಯುದ್ಧಕ್ಕೆ ಸನ್ನದ್ಧರಾಗಿದ್ದು ಹೃದಯದಲ್ಲಿ ನಮ್ರತೆಯನ್ನು ಹೊಂದಿರುವುದು. ಜೆನ್ ಪದ್ಧತಿಯನ್ನು ರೂಢಿಸಿಕೊಳ್ಳಲು ಬಲು ಉಪಯುಕ್ತ ಮಾರ್ಗವೆಂದರೆ, ಪ್ರತಿ ನಿತ್ಯವೂ ಚಾಚೂತಪ್ಪದೆ ಧ್ಯಾನ ಮಾಡುವುದು, ಧ್ಯಾನದಿಂದ ನಮ್ಮ ಆಲೋಚನೆಗಳಲ್ಲಿ ಸ್ಪಷ್ಟತೆಯನ್ನು ಕಾಣಬಹುದು. ಇದರಿಂದ ನಮ್ಮ ಜೀವನದಲ್ಲಿ ಪ್ರತಿಯೊಂದು ನಡೆ-ನುಡಿಯಲ್ಲಿ ಅರ್ಥಪೂರ್ಣ ನಿಲುವು ಕಾಣಿಸಿಕೊಳ್ಳುತ್ತದೆ. ಜೆನ್ ಸಿದ್ಧಾಂತದಲ್ಲಿರುವ ಪರಿಪೂರ್ಣತೆ ಮೆಚ್ಚತಕ್ಕದ್ದು, ಏಕೆಂದರೆ, ಆ ಯೋಚನೆಗಳ ಮೂಲಕ ಜೀವನದ ಮುಖ್ಯ ಉದ್ದೇಶವನ್ನು ಮನಗಾಣಲು ಸಾಧ್ಯವಿಲ್ಲ, ಅದಕ್ಕೆ ಆಲೋಚನೆಗಳನ್ನು ನಿರ್ಮೂಲ ಮಾಡಿದಾಗ ಮಾತ್ರ ಸಾಧ್ಯ.

ಮನಸ್ಸು ಅಂತ್ಯಗೊಂಡಾಗ ಮಾತ್ರ ಜೆನ್ ಪ್ರಾರಂಭವಾಗಲು ಸಾಧ್ಯ. ಜೆನ್ ಎಂದರೆ ಮನಸ್ಸಿನ ಸ್ಥಿತಿ ಅಲ್ಲ, ಅದು ಜೀವನದ ಸೌಂದರ್ಯವನ್ನು ಹಾಗೂ ಸತ್ಯವನ್ನು ಸವಿಯುವ ಸ್ಥಿತಿ. ಇದನ್ನು ತಲುಪಲು ಧ್ಯಾನವೊಂದೇ ದಾರಿ. ಬೇರೆ ಯಾವುದೇ ಶಾರ್ಟ್‌ಕಟ್ ಇಲ್ಲ, ಜೀವನದ ಗುರಿಯ ಬಗ್ಗೆ ಸ್ಪಷ್ಟತೆಯನ್ನು ಹೊಂದುವುದೇ ಜೆನ್. ಆಲೋಚನೆಗಳನ್ನು ಸರಿ ಅಥವಾ ತಪ್ಪು ಎಂದು ವಿಶ್ಲೇಷಿಸದೆ ಅದನ್ನು ಸ್ವಲ್ಪವೂ ಅಂಟಿಸಿಕೊಳ್ಳದೇ ಬಿಟ್ಟುಬಿಡಬೇಕು. ಅವು ತಮ್ಮಷ್ಟಕ್ಕೆ ತಾವೇ ಅದರ ಮೂಲದಲ್ಲಿ ನೆಲೆಯಾಗಲು ಬಿಡಿ. ಕೇವಲ ಸಾಕ್ಷಿಯಾಗಿ ಗಮನಿಸುತ್ತ ಇದ್ದುಬಿಡಿ.

ನದಿಯ ದಡದಲ್ಲಿ ಕುಳಿತು ನೀರನ್ನು ಸುಮ್ಮನೆ ಗಮನಿಸುವಂತೆ ಗಮನಿಸಬೇಕು. ನೀರಿನಲ್ಲಿರುವ ಕಡ್ಡಿಕಸ ತಾನೇ ತಾನಾಗಿ ತಳ ಮುಟ್ಟುವವರೆಗೂ ಸಹನೆಯಿಂದ ಕಾಯಬೇಕು. ಇದೇ ನಿಜವಾದ ಜೆನ್. ಇದರಿಂದ ಕೊಳದ ನೀರು ತಿಳಿಯಾದ ಮೇಲೆ, ಅದರ ನಿಜ ಸ್ವರೂಪ, ಸ್ವಚ್ಛ, ಸುಂದರವಾದ ಗುಣಧರ್ಮ ಗೋಚರವಾಗುತ್ತದೆ. ಜಪಾನ್‌ನಲ್ಲಿ ಇದನ್ನು "Za–Zen" ಎನ್ನುತ್ತಾರೆ. ಒಬ್ಬ ಧ್ಯಾನಿಯು ಸದಾ ಮುಗುಳ್ನಗುವಿನಿಂದ, ಉಲ್ಲಾಸದಿಂದ, ವಿನೋದದ ಮನೋಭಾವನೆಯಲ್ಲಿ ಇರುತ್ತಾನೆ. ಜೀವನವೇ ಒಂದು ರೀತಿಯ ಮನರಂಜನೆ ಆತನಿಗೆ. ಜೀವನವು ಒಂದು ಲೀಲೆ ಅಥವಾ ಒಂದು ನಾಟಕ ಮಾತ್ರ. ಯಾವಾಗಲೂ relaxed ಸ್ಥಿತಿಯಲ್ಲೇ ಇರುತ್ತಾನೆ. ನಿಮ್ಮ ಗಮನವನ್ನು ಪ್ರತಿ ಆಲೋಚನೆಯ ನಡುವೆ ಇರುವ ಮೌನದ ಕಡೆಗೆ ಹರಿಸಿದಾಗ, ನಿಮ್ಮ ಅಂತರ್ಯದಲ್ಲಿ ಉದ್ಭವಿಸುವ ಮನಸ್ಸಿನ ಅರ್ಥವಿಲ್ಲದ ಹರಟೆ ಕ್ರಮೇಣ ಮಾಯವಾಗುತ್ತದೆ. ಆಗ ಅಗಾಧವಾದ ಮೌನವನ್ನು ಸಾಧಿಸುತ್ತೇವೆ. ಇದೇ ನಿಜವಾದ ಶಾಂತಿ. ಮನಸ್ಸು ಎಂದರೆ ಮಾತುಗಳ, ಹರಟೆಯ ಶಬ್ದ, ಆತ್ಮ ಎಂದರೆ, ಮೌನದ ನಿಶ್ಶಬ್ದ, ಈ ಮೌನವೇ ನಮ್ಮ ನಿಜವಾದ ಗುಣಧರ್ಮ. ಆ ಮೌನವೇ ನಾವಾದಾಗ "ಮುನಿ" ಆಗುತ್ತೇವೆ. ಶಬ್ದದಿಂದ ನಿಶಬ್ದದೆಡೆಗೆ ಹೋಗುವುದೇ ಜೆನ್. ಇಲ್ಲೇ, ಈಗಲೇ ಈ ಕ್ಷಣದಲ್ಲಿ ಇರುವುದೇ - ಜೆನ್.

**-ಟಿ.ಕೆ.ಪ್ರೇಮ್ ಕುಮಾರ್**
**ಟ್ರಸ್ಟೀ, ಕೆ.ಪಿ.ಡಿ.ಪಿ ಟ್ರಸ್ಟ್**
**ಕನ್ನಡಕ್ಕೆ: ಬಿ.ಶ್ರೀನಿವಾಸ, ಬೆಂಗಳೂರು**

# ಪುಸ್ತಕ ಪರಿಚಯ

## ಜರ್ನಿ ಟು ದಿ ಸೆಂಟರ್ ಆಫ್ ಕ್ರಿಯೇಷನ್

ಇಲೋನ ಸೆಲ್ಕ್

ಪ್ರಕಾಶನ: ಸ್ಟಾರ್ ವುಡ್, ಡಬ್ಲ್ಯುಎ




''ನನ್ನ ಜೀವನದಲ್ಲಿ, ಹಲವಾರು ಜನರು ಅಥವಾ ಆತ್ಮಗಳು ಆಗಾಗ್ಗೆ ಬದಲಾದ ರೂಪಗಳಲ್ಲಿ ಕಾಣಿಸಿಕೊಂಡಿದ್ದಾರೆ. ಬೇರೊಬ್ಬರ ದೇಹದ ಮೂಲಕ ಜನರು ನನ್ನನ್ನು ಕಾಣಲು ಬರುತ್ತಿದ್ದರು ಅಥವಾ, ಒಂದು ರೀತಿಯ ಸಂಬಂಧವು ಬೇರೊಂದು ದೇಹದಲ್ಲಿರುವ ಮಾನವನೊಂದಿಗೆ ಮುಂದುವರೆದಿರುವಂತೆ ನನಗೆ ಭಾಸವಾಗುತ್ತಿತ್ತು. ನನ್ನ ನಿರೀಕ್ಷೆಗಳನ್ನು ನಾನು ವಿಸ್ತರಿಸಿಕೊಂಡಿರಬಹುದು - ನಿಜಕ್ಕೂ ಮನೋವಿಜ್ಞಾನವು ನನ್ನ ಅನುಭವಗಳನ್ನು ಹಾಗೆಂದು ವಿವರಿಸಬಹುದು. ಆದರೆ, ನಮ್ಮ ಸಂಪ್ರದಾಯ, ಸಂಸ್ಕೃತಿಗಳು ನಮಗೆ ತಿಳಿಸಿ ಹೇಳಿರುವುದಕ್ಕಿಂತ ಹೆಚ್ಚು ಸರಾಗವಾಗಿ ನಾವು, ಒಂದು ಆತ್ಮವಾಗಿ, ಆಕಾಶ (ಸ್ಪೇಸ್) ಮತ್ತು ಕಾಲಗಳ (ಟೈಮ್) ಮೂಲಕ ಸರಾಗವಾಗಿ, ಸುಲಭವಾಗಿ ಸಂಚರಿಸುತ್ತೇವೆ.''

## ದಿ ಲೈಫ್ ಆಫ್ ಮಿಲಾರೇಪ

ಲೋಬ್ ಸಾಂಗ್ ಜೀವಕ

ಪ್ರಕಾಶನ: ರೂಪ ಅಂಡ್ ಕಂಪನಿ, ಕೋಲ್ಕತ್ತ




''ಯಾವುದೇ ರೀತಿಯ ಸಂಬಂಧವೇ ಇಲ್ಲದ ನಾನು, ಮಾರ್ಪ ಎಂಬ ಹೆಸರಿನ ಈ ಮಹಾನ್ ಭಾಷಾಂತರಕಾರರನ್ನು ಭೇಟಿಯಾದುದೇ ನನ್ನ ಮಹಾ ಅದೃಷ್ಟದ ಸಂದರ್ಭವಾಯಿತು. ಅಲ್ಲದೆ, ಅವರು ನನ್ನ ಗುರುಗಳೂ ಸಹ ಆದರು. ಒಂದು ಜೀವಿತ ಕಾಲಾವಧಿಯಲ್ಲಿ ಬುದ್ಧತ್ವವನ್ನು ಪಡೆಯುವ ಕುರಿತಾಗಿ ಇರುವ ಸತ್ಯವನ್ನು ಅವರಿಂದ ನಾನು ಕಲಿತೆ. ಹೀಗಾಗಿ, ಇಡೀ ಮಾನವ ಕುಲದಲ್ಲಿಯೇ, ನಿಜವಾದ ಧೈರ್ಯ ಮತ್ತು ನೈಜವಾದ ಮಹತ್ವಾಕಾಂಕ್ಷೆಯನ್ನು ಹೊಂದಿರುವವನು ನಾನೊಬ್ಬನೇ.''

''ನಿನಗೆ ಸಂಬಂಧಿಸಿದಂತೆ ಹೇಳಬೇಕೆಂದರೆ... ಬುದ್ಧನ ದೇಶದಲ್ಲಿ ಹುಟ್ಟಿದ್ದರೂ ಸಹ, ನೀನು, ನಿನ್ನ ಜೀವಿತಾವಧಿಯಲ್ಲಿ ಒಂದಾದರೂ ಸಹ ಧಾರ್ಮಿಕ ಪ್ರವಚನವನ್ನು ಕೇಳಿಲ್ಲ ಮತ್ತು ಇರುವ ಎಲ್ಲಾ ಲೋಕಗಳಿಗಿಂತ, ನಿನ್ನ ಗುರಿಯನ್ನು ಅತ್ಯಂತ ಕೆಳಮಟ್ಟದಲ್ಲಿ ಇರಿಸಿಕೊಂಡಿದ್ದೀಯೆ. ಅಲ್ಲದೆ, ಆ ಗುರಿಯೂ ಸಹ ಅತ್ಯಂತ ದೀರ್ಘಕಾಲದ್ದಾಗಿದೆ! ನಿನ್ನದೇ ಆಗಿರುವ ಒಂದು ಬೃಹತ್ ಸಾಲದ ಖಾತೆಯನ್ನು ತೆರೆದು ಅದರಲ್ಲಿನ ಸಾಲದ ಮೊತ್ತವನ್ನು ಹೆಚ್ಚಿಸಿಕೊಳ್ಳುತ್ತಲೇ ಇದ್ದೀಯೆ. ಮೌಲ್ಯಗಳ ಕುರಿತಾಗಿ ನಿನಗೆ ಅಂತಹ ತಪ್ಪಾದ ಗ್ರಹಿಕೆಯು ಇದೆ! ಎಲ್ಲವನ್ನೂ ಹೋಲಿಸಿ ನೋಡಿದಾಗ, ನನ್ನ ಭವಿಷ್ಯದ ಆನಂದದ ನಿರೀಕ್ಷೆಯಲ್ಲಿ ನಾನು ಸಂತೋಷವಾಗಿದ್ದೇನೆ ಮತ್ತು ನಿಜಕ್ಕೂ ಸಂತೋಷವನ್ನು ಉಂಟುಮಾಡುವ ವಸ್ತು-ಪದಾರ್ಥಗಳನ್ನು ನಾನು ಆಹ್ಲಾದಿಸುತ್ತಿದ್ದೇನೆ! ಬುದ್ಧತ್ವವನ್ನು ಹೊಂದುವುದು, ಅನ್ನಾಹಾರ ಅಥವಾ ಬಟ್ಟೆಗಳನ್ನು ಪಡೆಯುವುದಕ್ಕೆ ನಡೆಸುವ ಪ್ರಯತ್ನಗಳಿಗಿಂತ ಬಹಳ, ಬಹಳ ಶ್ರೇಷ್ಠವಾದುದು.''

- ಕನ್ನಡಕ್ಕೆ : ಎ.ಸತ್ಯನಾರಾಯಣ

# ವಚನಕಾರ್ತಿ ಅಕ್ಕಮಹಾದೇವಿಯ ಜೀವನ



ಅಕ್ಕಮಹಾದೇವಿ ಕನ್ನಡ ಸಾಹಿತ್ಯದಲ್ಲಿ ಮೊದಲ ಕವಿಯತ್ರಿಯಾಗಿದ್ದಾಳೆ. ಅಸಾಧಾರಣ ಶಿವಭಕ್ತಿಯುಳ್ಳವಳಾಗಿ ಶಿವಶರಣರಿಂದ ಗೌರವ ಪಡೆದು ಬಸವಣ್ಣನವರು, ಅಲ್ಲಮಪ್ರಭು ಮುಂತಾದವರಿಂದಲೂ ಮಾನ್ಯತೆ ಪಡೆದವಳಾಗಿದ್ದಳು. ಚೆನ್ನಮಲ್ಲಿಕಾರ್ಜುನನ ಭಕ್ತಳಾಗಿ ವಚನಕಾರ್ತಿಯಾಗಿ ಮೆರೆದವಳು ಅಕ್ಕಮಹಾದೇವಿ. ಇವಳ ಕಾಲ ಸುಮಾರು ಕ್ರಿ.ಶ. 1160. ಶಿವಶರಣರು ಮಾಡಿದ ಮಹಾಕ್ರಾಂತಿಯಲ್ಲಿ ಅಕ್ಕಮಹಾದೇವಿಯ ಪಾತ್ರ ಸಹ ಮಹತ್ವದ್ದಾಗಿದೆ.

ಸಾಹಿತ್ಯ ಕ್ಷೇತ್ರದಲ್ಲಾಗಲಿ, ಆಧ್ಯಾತ್ಮಿಕ ಕ್ಷೇತ್ರದಲ್ಲಾಗಲಿ ಸ್ತ್ರೀಯರು ಪುರುಷರಿಗಿಂತ ಕಡಿಮೆಯಿಲ್ಲ ಎಂಬುದನ್ನು ಸಾಧಿಸಿತೋರಿದಳು. ಅಕ್ಕಮಹಾದೇವಿಯು ತನ್ನ ಭಕ್ತಿಭಾವ, ಅನುಭಾವ ವಚನಗಳಿಂದಾಗಿ ಶಿವಶರಣರಿಗೆ ಮಾರ್ಗದರ್ಶಕಳಾಗಿ ಅವರಿಗೆ ಪೂಜಾರ್ಹಳಾದವಳು. ಆತ್ಮಸಾಕ್ಷಾತ್ಕಾರವನ್ನು ಪಡೆಯುವುದು ಸ್ತ್ರೀಯರಿಂದಲೂ ಸಾಧ್ಯವೆಂದು ಜಗತ್ತಿಗೆ ತೋರಿಸಿಕೊಟ್ಟವಳಾಗಿದ್ದಾಳೆ.

ಸುಂದರಿ ಆಗಿದ್ದು, ರಾಜಭೋಗಗಳು, ವೈಭವಗಳು, ತನ್ನ ಕಡೆಗೆ ಬಂದಿದ್ದರೂ ಎಲ್ಲವನ್ನೂ ಹುಲ್ಲುಕಡ್ಡಿಗೆ ಸಮವೆಂದು ಭಾವಿಸಿ, ವೀರ ವಿರಾಗಿಣಿಯಾಗಿ, ಚೆನ್ನ ಮಲ್ಲಿಕಾರ್ಜುನನ ರಾಣಿಯಾಗಿ, ವಚನರಚನಾಕಾರ್ತಿಯಾಗಿ, ಅಕ್ಕ ಮಹಾದೇವಿಯು ಮೆರೆದಳು. ಹನ್ನೆರಡನೇ ಶತಮಾನದಲ್ಲಿ ಪ್ರಕಾಶಮಾನ ತಾರೆಯಾಗಿ ಬೆಳಕು ನೀಡಿದವಳು. ಸ್ತ್ರೀಯರಿಗೆ ಮನೆಯ ಒಳಗೆ ಮಾತ್ರವೇ ಅವಕಾಶ ಎಂದು ತಿಳಿದ ಕಾಲದಲ್ಲಿ ಪುರುಷರಿಗೆ ಸಮನಾಗಿ ವಿಚಾರ, ಭಕ್ತಿ ಸಾಧನೆ, ವಚನ ನಿರ್ಮಾಣ ಆತ್ಮಸಾಕ್ಷಾತ್ಕಾರ ಮುಂತಾದವುಗಳಿಂದ ಬದುಕಿ ಮಹಿಮಾನ್ವಿತ ಸ್ತ್ರೀ ರತ್ನವೆನಿಸಿದಳು.

ಶಿವಮೊಗ್ಗ ಜಿಲ್ಲೆಯ 'ಉಡುತಡಿ' ಎಂಬ ಹಳ್ಳಿಯಲ್ಲಿ ನಿರ್ಮಲಶೆಟ್ಟಿ ಮತ್ತು ಸುಮತಿ ಎಂಬ ಶಿವಭಕ್ತರ ಮಗಳಾಗಿ ಜನಿಸಿದಳು. ಬಾಲ್ಯದಲ್ಲಿಯೇ ಶಿವಭಕ್ತಿಯಲ್ಲಿ ಲೀನವಾಗಿರುತ್ತಿದ್ದ ಮಗಳನ್ನು ಕಂಡ ತಾಯಿ-ತಂದೆಯರಿಗೆ ಕುತೂಹಲ ಹಾಗೂ ಹೆಮ್ಮೆ ಎನಿಸಿತ್ತು. ಅಕ್ಕಮಹಾದೇವಿಯು ಬಾಲ್ಯ ಕಳೆದು ಯೌವ್ವನಕ್ಕೆ ಬರುವಾಗಲೇ ತನ್ನನ್ನು ಶಿವನಿಗೆ ಅರ್ಪಿಸಿಕೊಂಡಳು.

ಅಕ್ಕಮಹಾದೇವಿ ಅಸಾಧಾರಣ ಸುಂದರಿ ಎಂದು ತಿಳಿದು, ಆ ನಾಡಿನ ಅರಸ ಕೌಶಿಕನು ಅವಳ ಸೌಂದರ್ಯಕ್ಕೆ ಮಾರುಹೋದ. ಒಮ್ಮೆ ಕಂಡವನು ಅವಳಲ್ಲಿ ಮನವಿಟ್ಟು ಅವಳನ್ನು ಮದುವೆ ಆಗದಿದ್ದರೆ ಜೀವನವೇ ಶೂನ್ಯ ಎಂದು ತಿಳಿದು, ಅವಳನ್ನು ತನಗೆ ಮದುವೆ ಮಾಡಿಕೊಡಬೇಕೆಂದು ನಿರ್ಮಲ ಶೆಟ್ಟಿಗೆ ಸಂದೇಶ ಕಳಿಸಿದನು. ಸಾಮಾನ್ಯ ಪ್ರಜೆಗಳಾದ ನಿರ್ಮಲ ಮತ್ತು ಸುಮತಿಯರು ಅರಸನ ಕೋರಿಕೆಗೆ ಉತ್ತರಿಸಲಾರದೇ ತಮ್ಮ ಮಗಳ ಮನೋಭಾವವನ್ನು ತಿಳಿದವರಾಗಿ ಸಂಕಟಪಡುತ್ತಿರಲು; ತಾಯಿ ತಂದೆಯರ ದುಃಖವನ್ನು ಅರಿತ ಮಹಾದೇವಿ ರಾಜನ ಸಂಗಡ ದ್ವೇಷ ಉಂಟಾಗದಂತೆ ಕೆಲವು ಷರತ್ತುಗಳೊಂದಿಗೆ ಮದುವೆ ಆಗಲು ಒಪ್ಪಿದಳು.

ಕೌಶಿಕನು ಎಲ್ಲದಕ್ಕೂ ಆಗಲಿ ಎಂದನು. ತನಗೆ ಪೂಜೆ

ಮಾಡುವ ಸ್ವಾತಂತ್ರ್ಯ ಬೇಕೆಂದು ಹೇಳಿದ ಅಕ್ಕಮಹಾದೇವಿ ರಾಜನು ಮೂರು ತಪ್ಪುಗಳನ್ನು ಮಾಡಿದರೆ ಅನಂತರ ಅವನೊಂದಿಗೆ ತನ್ನ ಸಂಬಂಧವು ಇರುವುದಿಲ್ಲ ಎಂದು ಕರಾರು ಹಾಕಿದಳು. ಅನಂತರ ಕೌಶಿಕನೊಂದಿಗೆ ವಿವಾಹವಾಗಿ ರಾಣಿಯಾಗಿ ಅರಮನೆಯನ್ನು ಸೇರಿದಳು.

ರಾಜ ಕೌಶಿಕನು ಮೂರು ತಪ್ಪುಗಳನ್ನು ಮಾಡಿದಾಗ ಅವನು ವಚನ ಭ್ರಷ್ಟನಾದನೆಂದು ಅಕ್ಕಮಹಾದೇವಿಯು ಸಂಸಾರ ಬಂಧನದಿಂದ ಮುಕ್ತಳಾಗಿ ಜಗತ್ತಿನ ಉದ್ಧಾರಕ್ಕಾಗಿ ಕೌಶಿಕನಿಂದ ದೂರವಾದಳು. ಸಕಲ ವೈಭವಗಳನ್ನು, ಸಂಪತ್ತು, ಅಧಿಕಾರ, ಭೋಗಭಾಗ್ಯಗಳನ್ನು ತೊರೆದು ಚೆನ್ನಮಲ್ಲಿಕಾರ್ಜುನನ ಭಕ್ತಳಾಗಿ ಹೊರಹೊರಟಳು. ಶಿವನ ವಿಭೂತಿಯನ್ನು ಅರಿಸಿನವೆಂದು, ದಿಗಂಬರತನವೇ ದಿವ್ಯವಸ್ತ್ರವೆಂದು, ಶಿವಪಾದಧೂಳಿಯೇ ಲೇಪನವೆಂದು ತಿಳಿದಳು. ರುದ್ರಾಕ್ಷಿಯನ್ನೇ ಆಭರಣಗಳನ್ನಾಗಿ ಮಾಡಿಕೊಂಡಳು. ಶರಣರ ಪಾದಗಳೇ ತೊಂಡಿಲ ಬಾಸಿಂಗವೆನಗೆ ಎಂದಳವಳು ಚೆನ್ನಮಲ್ಲಿಕಾರ್ಜುನನೇ ತನ್ನ ಗಂಡ ಎಂದು ಭಾವಿಸಿದಳು.

ಜನರ ವಿರೋಧವನ್ನು ತಿಳಿದರೂ ಹೆದರದೇ ''ಬೆಟ್ಟದಾ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದೊಡೆ ಎಂತಯ್ಯಾ? ಸಮುದ್ರದ ತಡಿಯಲೊಂದು ಮನೆಯ ಮಾಡಿ ನೆರೆ ತೆರೆಗಳಿಗಂಜಿದೊಡೆಂತಯ್ಯಾ? ಸಂತೆಯೊಳಗೊಂದು ಮನೆಯ ಮಾಡಿ ಗದ್ದಲಕ್ಕೆ ನಾಚಿದೊಡೆ ಎಂತಯ್ಯಾ?'' ಎಂದು ಹೇಳಿ, ಸ್ತುತಿ ನಿಂದೆಗಳು ಬಂದರೆ ಸಿಟ್ಟಿಗೇಳದೇ ಸಮಾಧಾನಿ ಆಗಿರಬೇಕು. ಎಂದು ಸಾರಿದಳು.

ಅಕ್ಕಮಹಾದೇವಿಯು 'ಚೆನ್ನಮಲ್ಲಿಕಾರ್ಜುನ' ಎಂಬ ಅಂಕಿತವನ್ನು ಇಟ್ಟುಕೊಂಡು ಅನೇಕ ವಚನಗಳನ್ನು ರಚಿಸಿ ಹಾಡಿದಳು. 'ಯೋಗಾಂಗತ್ರಿವಿಧಿ' ಸೃಷ್ಟಿಯ ವಚನ ಎಂದು ವ್ಯಾಖ್ಯಾನವನ್ನು ಸಹ ರಚಿಸಿದ್ದಾಳೆ. ಇವುಗಳಲ್ಲಿ ಜೀವನದ ಉದ್ದೇಶಗಳನ್ನು , ಆಧ್ಯಾತ್ಮಿಕ ಮಹತ್ವವನ್ನು ವಿವರಿಸಿದ್ದಾಳೆ.

ಚೆನ್ನಮಲ್ಲಿಕಾರ್ಜುನನ ವಿರಹವನ್ನು ತಾಳಲಾರದೇ ಶ್ರೀಶೈಲದ ಕಡೆಗೆ ಹೊರಟಳು. ಆ ಸಮಯದಲ್ಲಿ ಯೋಗ ಸಾಧನೆಗೆ 'ಅನುಭವ ಮಂಟಪವು' ಕಲ್ಯಾಣದಲ್ಲಿ ಪ್ರಖ್ಯಾತವಾಗಿತ್ತು. ಅಲ್ಲಮಪ್ರಭುವು ಆ ಶೂನ್ಯ ಸಿಂಹಾಸನದ ಅಧಿಪತಿಯಾಗಿದ್ದನು. ಅಕ್ಕಮಹಾದೇವಿಯು ಅಲ್ಲಿಗೆ ಬಂದಾಗ, ಸ್ತ್ರೀಯೊಬ್ಬಳು ದಿಗಂಬರಳಾಗಿ ತನ್ನ ಕೇಶಪಾಶಗಳಿಂದ ಯೌವನಭರಿತ ದೇಹವನ್ನು ಮರೆಮಾಡಿಕೊಂಡಿರುವುದನ್ನು ಅರಿತ ಶಿವಶರಣರಲ್ಲಿ ವಿದ್ಯುತ್ ಸ್ಪರ್ಶವಾದಂತಾಯಿತು.

ವಿದ್ಯುಕ್ತಿನಂತೆ, ಸ್ಫಟಿಕ ಶಲಾಕೆಯಂತಿರುವ ಅಕ್ಕಮಹಾದೇವಿಗೆ ಅಲ್ಲಮಪ್ರಭು ಈ ರೀತಿಯಲ್ಲಿ ಪ್ರಶ್ನಿಸಿದ್ದಾನೆ. ''ಯೌವನದ ಸತಿ ನೀನು ಇತ್ತೇಕೆ ಬಂದೆಯವ್ವ? ಸತಿಯೆಂದರೆ, ಮುನಿದರು ಶರಣರು, ನಿನ್ನ ಪತಿಯ ಕುರುಹು ಕೇಳಿದರೆ ಬಂದು ಕುಳ್ಳಿರು, ಇಲ್ಲದಿರೆ ತೊಲಗು ತಾಯಿ'' ಅಲ್ಲಮ ಪ್ರಭುವಿನ ಕಠಿಣ ಮಾತಿಗೆ ಹೆದರದ ಅಕ್ಕಮಹಾದೇವಿ, ಎನ್ನ ಗಂಡ ಚೆನ್ನಮಲ್ಲಿಕಾರ್ಜುನ, ಅವನೇ ಲೋಕದಗಂಡ, ಉಳಿದ ಶರಣರೆಲ್ಲ ಸ್ತ್ರೀಯರು ಎಂದು ಹೇಳಿದಳು.

''ಹರನೇ ಎನಗೆ ಗಂಡನಾಗಬೇಕೆಂದು ಬಹಳ ಕಾಲ ತಪಸ್ಸು ಆಚರಿಸಿದೆ, ಚೆನ್ನಮಲ್ಲಿಕಾರ್ಜುನನೆಂಬ ಗಂಡನಿಗೆನ್ನ ಕೊಟ್ಟು ಮದುವೆ ಮಾಡಿದರು. ಲೋಕದ ಗಂಡರೆನಗೆ ಸಂಬಂಧವಿಲ್ಲ'' ಎಂದಾಗ, ಅಲ್ಲಮಪ್ರಭು, ಬಸವಣ್ಣನವರು ಮುಂತಾದವರನ್ನು ಒಳಗೊಂಡಂತೆ ಎಲ್ಲರಿಗೂ ಆಶ್ಚರ್ಯವಾಯಿತು. ಅವಳ ವಚನ ರಚನಾ ಶಕ್ತಿಗೆ, ವಿಚಾರಕ್ಕೆ ತಲೆದೂಗಿ ಉಘೇ ಉಘೇ ಎಂದರು. ಕೆಲವು ಕಾಲದವರೆಗೆ ಶರಣರೊಂದಿಗೆ ಕಲ್ಯಾಣದಲ್ಲಿದ್ದು ನಂತರ ಶ್ರೀಶೈಲದ ಹಾದಿ ಹಿಡಿದಳು.

ಅಕ್ಕಮಹಾದೇವಿ ಶ್ರೀಶೈಲದಲ್ಲಿ ಕೆಲಕಾಲವಿದ್ದು ಕದಳೀವನದಲ್ಲಿ ಬಯಲಾದಳು ಎಂದು ತಿಳಿದುಬರುವುದು. ಅಕ್ಕಮಹಾದೇವಿಯ ವಚನಗಳನ್ನು ಅವಳ ಸುಂದರವಾದ ವಚನಗಳ ಸ್ವಾರಸ್ಯವನ್ನು ಮೆಚ್ಚದವರಿಲ್ಲ. ಅನೇಕ ಶಿವಶರಣರು ಅಕ್ಕಮಹಾದೇವಿಯನ್ನು ಹಾಡಿ ಹೊಗಳಿದ್ದಾರೆ ಹನ್ನೆರಡನೇ ಶತಮಾನದಲ್ಲಿ ಅನೇಕ ಮಹಿಳೆಯರು ವಚನಗಳನ್ನು ರಚಿಸಿದ್ದಾರೆ. ವಚನ ಸಾಹಿತ್ಯ ವೈಭವ ಪರಾಕಾಷ್ಠೆಯನ್ನು ತಲುಪುವಂತೆ ಮಾಡಿದಳು. ಜನಸಾಮಾನ್ಯರಿಗೆ ಸಹಜವಾಗಿ ಸುಲಭವಾಗಿಯೇ ತಿಳಿಯುವಂತೆ ವಚನಗಳನ್ನು ರಚಿಸಿದ ಅಕ್ಕಮಹಾದೇವಿ ವಿಶ್ವಸಾಹಿತ್ಯ ರಚನಾಕಾರರಲ್ಲಿ ಒಂದು ಶ್ರೇಷ್ಠ ಸ್ಥಾನವನ್ನು ಪಡೆದಿದ್ದಾಳೆ. ಬದುಕಿನ ರೀತಿ-ನೀತಿ, ವಿಶ್ವ ಪ್ರೇಮ, ವಿಶಾಲ ಹೃದಯ, ಶಿವ-ಜಂಗಮ ಪೂಜೆ, ಪ್ರಸಾದ ಶ್ರೇಷ್ಠತೆಗೆ, ರುದ್ರಾಕ್ಷಿ, ಭಸಿತಗಳ ಮಹತ್ವ ತಿಳಿಸುವಲ್ಲಿ ಅಕ್ಕಮಹಾದೇವಿ ಯಶಸ್ವಿಯಾಗಿದ್ದಾಳೆ.

**ವಚನಕಾರ್ತಿ ಅಕ್ಕಮಹಾದೇವಿ**

ಹನ್ನೆರಡನೇ ಶತಮಾನದಲ್ಲಿ ಸಾಮಾಜಿಕ ಧಾರ್ಮಿಕ ಕ್ರಾಂತಿ

ಆಗಿ ವಿಚಾರ, ಸಾಹಿತ್ಯ ಕ್ಷೇತ್ರಗಳಲ್ಲಿಯೂ ಮಹತ್ವದ ಪರಿವರ್ತನೆಯಾಯಿತು. ಸ್ವತಂತ್ರ ಆಲೋಚನೆ, ದೇಸೀಶೈಲಿ ಜನರ ಆಡುಭಾಷೆಗೆ ಪ್ರಾಧ್ಯಾನ್ಯತೆ ಪಡೆದು ಸರಸ್ವತಿ ಜನ ಸಾಮಾನ್ಯರ ಅಂಗಳದಲ್ಲಿ, ಮನೆಯಲ್ಲಿ ಆಶ್ರಯ ಪಡೆದಳು. ರಗಳೆ, ತ್ರಿಪದಿ, ಸಾಂಗತ್ಯ, ಷಟ್ಪದಿ ಈ ಛಂದಸ್ಸುಗಳ ಪ್ರಕಾರಗಳೊಂದಿಗೆ ವಚನ ಪ್ರಕಾರವು ಆರಂಭವಾಯಿತು. ಈ ವಚನಗಳಲ್ಲಿ ಧರ್ಮಸಿದ್ಧಾಂತ ಬೋಧನೆಗಳು, ಉಪದೇಶಗಳು, ಷಟ್‌ಸ್ಥಲ ಸಿದ್ಧಾಂತ, ದೇವ-ಗುರು-ಲಿಂಗ-ಜಂಗಮಪೂಜೆ ಪ್ರಮುಖ ವಿಷಯಗಳಾದವು. ಅಕ್ಕಮಹಾದೇವಿ ಚೆನ್ನ ಮಲ್ಲಿಕಾರ್ಜುನ ಎಂಬ ಅಂಕಿತದಿಂದ ವಚನಗಳನ್ನು ರಚಿಸಿದಳು.

ಅಕ್ಕನು ತನ್ನ ವಚನಗಳಲ್ಲಿ 'ಚೆನ್ನಮಲ್ಲಿಕಾರ್ಜುನನೇ ಗಂಡನೆನಗೆ' ಎಂದು ತಿಳಿಸಿದ್ದಾಳೆ. ಜನರ ರೋಷಕ್ಕೆ ಸಿಟ್ಟಿಗೇಳದೆ ಶಾಂತಿಯಿಂದ ಸಹಿಸಿಕೊಂಡಿದ್ದಾಳೆ. ಶರಣರು ಯಾವಾಗಲೂ ಸಮಾಧಾನಿಗಳಾಗಿರಬೇಕು ಎಂದಿದ್ದಾಳೆ. ಈ ರೀತಿಯ ವಚನಗಳಲ್ಲಿ ಆಧ್ಯಾತ್ಮಿಕ, ಶೃಂಗಾರ, ಲಿಂಗಪತಿ ಶರಣಸತಿ, ಭವಜೀವನದ ಉದ್ದೇಶಗಳು ಉತ್ತಮವಾಗಿ ಮೂಡಿಬಂದಿವೆ. ವಯಸ್ಸು ಬಹಳವಾದವರು ಹಿರಿಯರಲ್ಲವೆಂದು ಹೇಳಿ ''ಚೆನ್ನ ಮಲ್ಲಿಕಾರ್ಜುನನಲ್ಲಿ ಬೆರೆತ ಹಿರಿಯತನ ನಮ್ಮ ಮಹದೇವಿಯಕ್ಕಂಗಾಯ್ತು'' ಎನ್ನುವಂತಾಗಿದ್ದಾಳೆ.

ಚೆನ್ನ ಮಲ್ಲಿಕಾರ್ಜುನ ವಿರಹವನ್ನು ಸಹಿಸಲಾರದೇ ಮಾಮರ, ಭ್ರಮರಕೋಗಿಲೆ ಇವುಗಳನ್ನು ಸಹ ''ಎನ್ನೊಡೆಯ ಚೆನ್ನ ಮಲ್ಲಿಕಾರ್ಜುನ ದೇವರ ಕಂಡಿರೆ, ಕಂಡಿರೆ ತೋರಿರೆ'' ಎಂದು ಕೇಳಿದ್ದಾಳೆ. ''ಆಡಿದೆನಯ್ಯಾ ನೀನಾಡಿಸಿದಂತೆ ಆನಿದ್ದೆಯನ್ನಯ್ಯಾ ನೀನಿರಿಸಿದಂತೆ ಜಗದ ಯಂತ್ರವಾಹಕ ಚೆನ್ನ ಮಲ್ಲಿಕಾರ್ಜುನ'' ಎಂದು ಭಗವಂತನನ್ನು ಹೊಗಳಿದ್ದಾಳೆ.

ಎಲ್ಲ ದೇವರ ದೇವ ದೇವವಲ್ಲಭನೆ ಗುರು,<br>
ಮನದೊಳಗೆ ಇರುಕಂಡ್ಯ ಚೆನ್ನಮಲ್ಲಿಕಾರ್ಜುನನೆ<br>
ಬಲ್ಲಂತೆ ನಿಮ್ಮ ಸ್ತುತಿಸುವೆನು

ಅಷ್ಟದಳದ ಕಮಲದ ಬಟ್ಟ ಬಯಲೊಳಗೊಂದು<br>
ಮುಟ್ಟಬಾರದ ಮನವಿಹುದು, ಮನದೊಳಗೆ<br>
ದೃಷ್ಟಿಯಿಟ್ಟವನೇ ಕಡುಜಾಣ

ಈ ತ್ರಿಪದಿಗಳಲ್ಲಿ ಅಕ್ಕಮಹಾದೇವಿಯ ವಿಶೇಷತೆಯನ್ನು ಕಾಣಬಹುದಾಗಿದೆ. ಪನ್ನಗಧರನ ಶರಣರು ಚೆನ್ನ ಬಣ್ಣಗಳಂತೆ, ರನ್ನ ದೀಪ್ತಿಗಳಂತೆ, ಬಿನ್ನವಿಲ್ಲದದೆಲೆ ಬರೆದಿಹರು ಎಂದಿದ್ದಾಳೆ. ಅಕ್ಕಮಹಾದೇವಿಯ ಕೆಲವು ವಚನಗಳಲ್ಲಿ ಹೀಗೆ ವಾಕ್ಯಗಳಿವೆ,

**''ನಾಳೆ ಬರುವುದು ನಮಗಿಂದೇ ಬರಲಿ, ಇಂದು ಬರುವುದು ಈಗಲೇ ಬರಲಿ. ಹೆದರದಿರು ಮನವೆ, ಬೆದರದಿರು ಮನವೆ, ನಿಜವನರಿತು ನಿಶ್ಚಿಂತನಾಗಿರು. ಗುರುವಿನಿಂದ ನನ್ನ ನಾ ಕಂಡೆ ಚೆನ್ನ ಮಲ್ಲಿಕಾರ್ಜುನ, ತನ್ನ ವಿನೋದಕ್ಕೆ ತಾನೇ ಸೃಜಿಸಿದ ಜಗತ್ತು, ಬಿಟ್ಟೆನೆಂದರೆ ಬಿಡದೀ ಮಾಯೆ, ಕಿಚ್ಚಿಲ್ಲದ ಬೇಗೆಯಲಿ ಬೆಂದೆನವ್ವ, ಶಿವಭಕ್ತರ ರೋಮ ನೊಂದರೆ ಒಡನೆ ಶಿವನು ನೋವ ನೋಡಾ. ಶಿವಭಕ್ತರ ಮನೆಯಂಗಳ ವಾರಣಾಸಿ ಎಂಬುದು ಹುಸಿಯೇ? ಸಾವಿಲ್ಲದ ಕೇಡಿಲ್ಲದ ಚೆಲುವಂಗಾನು ಒಲಿದೆನಯ್ಯಾ, ರತ್ನಸಂಕಲೆಯಾದಡೇನು? ಬಂಧನ ಬಿಡುವುದೇ''**

**- ಸಂಗ್ರಹ: ಎ.ಸತ್ಯನಾರಾಯಣ**

**ಪತ್ರೀಜಿ ಕ್ಯಾಲೆಂಡರ್ - ಡಿಸೆಂಬರ್ 2009**





| | | | | | |
|---|---|---|---|---|---|
| ಡಿಸೆಂಬರ್ 1-3 | : | ಬೆಂಗಳೂರು | ಡಿಸೆಂಬರ್ 14-17 | : | ಹೈದರಾಬಾದ್ |
| ಡಿಸೆಂಬರ್ 4-6 | : | ಮುಂಬೈ | ಡಿಸೆಂಬರ್ 18 | : | ಮದನಪಲ್ಲಿ |
| ಡಿಸೆಂಬರ್ 7 | : | ಸೂರತ್ | ಡಿಸೆಂಬರ್ 19 | : | ಬೆಂಗಳೂರು |
| ಡಿಸೆಂಬರ್ 8 | : | ಬರೋಡಾ | ಡಿಸೆಂಬರ್ 20 | : | ಕೊಯಂಬತ್ತೂರು |
| ಡಿಸೆಂಬರ್ 9 | : | ಅಹ್ಮದಾಬಾದ್ | ಡಿಸೆಂಬರ್ 21 | : | ಉಡಮಾಲ್ಪೇಟ |
| ಡಿಸೆಂಬರ್ 10 | : | ಪುಣೆ | ಡಿಸೆಂಬರ್ 22 | : | ಬೆಂಗಳೂರು |
| ಡಿಸೆಂಬರ್ 11 | : | ಸೋಲಾಪುರ | ಡಿಸೆಂಬರ್ 23,24 | : | ಹೈದರಾಬಾದ್ |
| ಡಿಸೆಂಬರ್ 12 | : | ಬಿಜಾಪುರ | ಡಿಸೆಂಬರ್ 25-31 | : | ಶ್ರೀಶೈಲಂ |
| ಡಿಸೆಂಬರ್ 13 | : | ಗುಲ್ಬರ್ಗಾ | | | |



## ಸಿನಿಮಾ ಯೆಸ್ಟರ್‌ಡೇಸ್ ಚಿಲ್ಡ್ರನ್ (ನಿನ್ನೆಯ ಮಕ್ಕಳು)



ನಿರ್ದೇಶನ : ಮಾರ್ಕಸ್ ಕೋಲ್

ಬಿಡುಗಡೆ : 15 ಅಕ್ಟೋಬರ್ (USA)

ಸಾರಾಂಶ: ಕಾಡುತ್ತಿರುವ ಕನಸುಗಳನ್ನು ಹಿಂಬಾಲಿಸಿಕೊಂಡು ಹೋಗಿ, ತನ್ನದೇ ಆದ ಪೂರ್ವ ಜನ್ಮವನ್ನು ಸಂಧಿಸಿದ ಓರ್ವ ಪ್ರೇಮಿ.

ಈ ಚಿತ್ರ ಬಹಳ ಅಪರೂಪದ ಹಾಗೂ ಅಪೂರ್ವವಾದ ಸಂಗತಿಯನ್ನು ನಮ್ಮ ಮುಂದಿಡುತ್ತದೆ. ಆತ್ಮ ಶೋಧನೆಗೆ ಉಪಯುಕ್ತವಾಗುವ ಚಿತ್ರ. ಜೇನ್ ಸೇಮೋರ್ ಎಂಬಾಕೆ ನಟಿಸಿದ್ದಾರೆ. ತಮ್ಮ ಪಾತ್ರಕ್ಕೆ ಜೀವ ತುಂಬಿಸಿದ ಹಿರಿಮೆ ಅವರದ್ದು. ಜೆನ್ನಿ ಕೋಲ್ ಎಂಬ ಪಾತ್ರದಲ್ಲಿ ಈಕೆಗೆ ದಿಗ್ಭ್ರಮೆಗೊಳಿಸುವಂತಹ ಕನಸುಗಳು ಮರುಕಳಿಸುತ್ತಲೇ ಇರುತ್ತವೆ. ಪ್ರತಿ ಸಾರಿಯೂ ಅದೇ ತರದ ಕನಸು. ಆ ಕನಸುಗಳಲ್ಲಿ ಮೇರಿ ಸೂಟಾನ್ ಎಂಬಾಕೆ ತನ್ನ ಕುಡುಕ ಗಂಡನ ಜೊತೆಗೆ ಪಡುತ್ತಿದ್ದ ಕಷ್ಟಗಳನ್ನು ನೋಡುತ್ತಾಳೆ. ಮೇರಿ ಎಂಬುವಳಿಗೆ ನಾಲ್ವರು ಮಕ್ಕಳು. ಆ ಕನಸಿನಲ್ಲಿ ಆಕೆ ಕಂಡದ್ದೇನೆಂದರೆ, ಮೇರಿಗೆ ಮತ್ತೊಮ್ಮೆ ಮಗುವಾದರೆ, ಆಕೆಯ ಪ್ರಾಣಕ್ಕೆ ಅಪಾಯ ಎಂದು. ಅವಳ ಗಂಡನಿಗೆ ಕುಡಿತದ ಅಮಲಿನಲ್ಲಿ ಇದ್ದಾವುದರ ಪರಿವೆಯೇ ಇಲ್ಲ. ಕನಸಿನಲ್ಲಿ ಕಂಡ ಈ ಕುಟುಂಬವು ಐರ್‌ಲ್ಯಾಂಡ್‌ನಲ್ಲಿದೆ ಎಂಬ ವಿಷಯವು ಕೂಡಾ ಆಕೆಗೆ ಸ್ಪಷ್ಟವಾಗಿ ಗೊತ್ತಾಗುತ್ತಿದೆ.




ಈ ಕನಸು ಕಾಣುತ್ತಿರುವ ಮಹಿಳೆ ಜೆನ್ನಿ ಎಂಬುವಳು ಅಮೆರಿಕಾ ನಿವಾಸಿ. ತನ್ನ ಗಂಡನ (ಆರ್ಕಿಟೆಕ್ಟ್) ಜೊತೆ ಹಾಯಾಗಿರುವಾಗ ಒಮ್ಮೆ ಈ ಕನಸು ಬೀಳುತ್ತದೆ. ಅದಾದ ಮೇಲೆ ಆಶ್ಚರ್ಯಕರವಾಗಿ ಪ್ರತಿ ರಾತ್ರಿ ಅದೇ ಬಗೆಯ ಕನಸು, ಆ ಕನಸಿನಲ್ಲಿ ನಾಲ್ವರು ಮಕ್ಕಳು ಹಾಗೂ ಕುಡುಕ ಗಂಡ. ಇನ್ನೂ ಅಚ್ಚರಿ ಮೂಡಿಸುವ ವಿಷಯವೆಂದರೆ, ಆ ಕನಸುಗಳು ಶುರುವಾದ ನಂತರ, ತಾನು ಗರ್ಭವತಿಯೆಂದು ತಿಳಿದು ಬರುತ್ತದೆ. ಅವರ ತಾಯ್ತನವು ಮುಂದುವರೆದಂತೆ ಆ ಕನಸುಗಳೂ ಮುಂದುವರೆಯುತ್ತವೆ. ಆ ಕನಸುಗಳೆಲ್ಲವೂ ತನ್ನದೇ ಆದ ಹಿಂದಿನ ನೆನಪುಗಳು ಎನ್ನುವ ಮಟ್ಟಿಗೆ ಅವುಗಳನ್ನು ಆಕೆ ಒಪ್ಪಿಕೊಂಡು ಬಿಡುತ್ತಾಳೆ. ಎಷ್ಟು ತೀವ್ರತೆಯನ್ನು ಹೊಂದುತ್ತಾಳೆಂದರೆ, ಐರ್‌ಲ್ಯಾಂಡ್ ರಾಷ್ಟ್ರದಲ್ಲಿ ಕನಸಿನ ಆ ಮೇರಿಯು ವಾಸವಿರುವ ಊರು ಹಾಗೂ ಮನೆಯನ್ನು ತಲುಪುವ ನಕ್ಷೆಯನ್ನು ಕೂಡಾ ಚಿತ್ರಿಸಬಲ್ಲವಳಾಗುತ್ತಾಳೆ.

ತನ್ನ ಗತ ಜನ್ಮವನ್ನು ಕನಸಿನ ಮೂಲಕ ಸ್ಮರಿಸಿಕೊಳ್ಳುತ್ತಿದ್ದಾಳೆಂದು ತನಗೆ ತಾನೇ ಭರವಸೆ ಹೊಂದುತ್ತಾಳೆ. ನಂತರ, ತನ್ನ ಗಂಡ ಹಾಗೂ ಮಗನಿಗೆ ಅವಳ ಹಿಂದಿನ ಜನ್ಮದ ಬಗ್ಗೆ ವಿವರಿಸಲು ಪ್ರಾರಂಭಿಸುತ್ತಾಳೆ. ತನ್ನ ಹಿಂದಿನ ಜನ್ಮದಲ್ಲಿ ಮೇರಿಯ ರೂಪದಲ್ಲಿ ಬಾಳುತ್ತಿದ್ದ ಕಾಲ ಸುಮಾರು 1930ರ ಇಸವಿಯಲ್ಲಿ ಎಂದಾದರೆ, ತನ್ನ ನಾಲ್ಕು ಮಂದಿ ಮಕ್ಕಳು ಇನ್ನೂ ಜೀವಂತ ಇರಲೇಬೇಕೆಂಬ ದೃಢ ನಂಬಿಕೆ ಆಕೆಗೆ ಉಂಟಾಗುತ್ತದೆ. ಈ ನಂಬಿಕೆ ಬೇರೂರಿದ ಮೇಲೆ ಇನ್ನು ಆ ತಾಯಿಯ ಕರುಳು ತನ್ನ ಮಕ್ಕಳನ್ನು ನೋಡಬೇಕು, ಅವರನ್ನು ಹೇಗಾದರೂ ಪತ್ತೆಹಚ್ಚಬೇಕೆಂಬ ಹಂಬಲ ಬಲವಾಗಿ ಅವಳನ್ನು ಆವರಿಸಿಕೊಳ್ಳುತ್ತದೆ. ಆ ಹುಡುಕಾಟದಲ್ಲಿ ಆಕೆ ಲೆಕ್ಕವಿಲ್ಲದಷ್ಟು ಕಾಗದಗಳನ್ನು ಬರೆಯುತ್ತಾಳೆ, ಲೆಕ್ಕವಿಲ್ಲದಷ್ಟು ಫೋನ್ ಕಾಲ್ಸ್ ಮಾಡುತ್ತಾಳೆ. ಆದರೆ, ಯಾವುದಕ್ಕೂ ಉತ್ತರ ಸಿಗುವುದಿಲ್ಲ. ಕಡೆಗೆ ಅವಳ ತಾಯಿ ಮಾರ್ಗರೇಟ್ ಸಹಾಯದಿಂದ, ಮಕ್ಕಳನ್ನು ಹುಡುಕಿಕೊಂಡು ಐರ್ಲ್ಯಾಂಡ್‌ಗೆ ಹೊರಟು ಬಿಡುತ್ತಾಳೆ.

ತನ್ನ ನೆನಪುಗಳ ಸಹಾಯದಿಂದ ಬಹಳ ಸುಲಭವಾಗಿ ಮೇರಿಯು ಇರುತ್ತಿದ್ದ ಸ್ಥಳವನ್ನು ತಲುಪುತ್ತಾಳೆ. ತಾನು ಶೇಖರಿಸಿದ ಅಷ್ಟೂ ಮಾಹಿತಿಯ ಸಹಾಯದಿಂದ ಮೇರಿಯ ಹಿರಿಯ ಮಗ ಸನ್ನಿಯನ್ನು ಭೇಟಿಮಾಡುತ್ತಾಳೆ. ತಾಯಿ ಮೇರಿಯ ಅಗಲಿಕೆಯಿಂದ ಸನ್ನಿಯೂ ಕೂಡಾ ತತ್ತರಿಸಿಹೋಗಿರುತ್ತಾನೆ. ಜೆನ್ನಿಯು ಬಂದುದು ಅಪಾರವಾದ ಸಂತೋಷವಾದರೂ, ಯಾರೂ ಆಕೆಯ ಮಾತನ್ನು ಒಪ್ಪುವುದಿಲ್ಲ. ತಾನೇ ಹಿಂದಿನ ಜನ್ಮದಲ್ಲಿ ಮೇರಿಯಾಗಿದ್ದಳೆಂದು ಎಷ್ಟೋ ಹೇಳುತ್ತಾಳೆ. ಆದರೆ, ಅದರಿಂದ ಪ್ರಯೋಜನವಾಗದು. ಈಗ ಜೆನ್ನಿಯು ಹಳೆಯದನ್ನು ಬಿಟ್ಟು ತನ್ನ ಪ್ರಸ್ತುತ ಜೀವನವನ್ನು ಹಾಗೂ ಸದ್ಯದಲ್ಲಿ ದೊರಕಿದ ತನ್ನ ಪಾತ್ರವನ್ನು ಒಪ್ಪಿಕೊಂಡು, ಜೀವನದ ಜೊತೆ ಸಂಧಾನವನ್ನು ಮಾಡಿಕೊಂಡು ಶಾಂತಿಯಿಂದ ಬಾಳುವುದೇ ಉತ್ತಮ ಎಂದು ಆಕೆ ತಿಳಿಯಬೇಕಾಗಿದೆ.

ಅತ್ಯದ್ಭುತವಾದ ಚಿತ್ರ ಇದು. ಈ ಚಿತ್ರದ ತಿರುಳೇನೆಂದರೆ, ಹಳೆಯ ನೆನಪುಗಳು ನಮ್ಮ ಸುಪ್ತ ಮನಸ್ಸಿನಲ್ಲಿ ಅಡಗಿರುತ್ತವೆ. ಆ ಕರ್ಮಗಳು ಕಳೆಯುವಾಗ ಸ್ಮೃತಿಗಳಂತೆ ಕಾಣಿಸಿಕೊಂಡರೂ, ಅದನ್ನು ಸುಮ್ಮನೆ ಒಪ್ಪಿಕೊಂಡು ಮುನ್ನಡೆಯಬೇಕು. ಇದರ ಜೊತೆಗೆ ಇನ್ನೊಂದು ಸತ್ಯವೇನೆಂದರೆ, ಒಬ್ಬ ವ್ಯಕ್ತಿಗೆ ಅಂತಃಸ್ಫುರಣೆ ಉಂಟಾದಾಗ, ಅದನ್ನು ನಂಬಿ, ಹಿಂಬಾಲಿಸಿದರೆ, ಬಹು ಸುಲಭವಾಗಿ ತನ್ನ ಗುರಿಯನ್ನು ತಲುಪಿ ಅಲ್ಲಿ ಪೂರ್ಣಗೊಳಿಸದೆ ಇರುವ ಯಾವುದೇ ಕಾರ್ಯಗಳನ್ನು ಮುಗಿಸಿ, ಕರ್ಮ ಬಂಧನದಿಂದ ಮುಕ್ತರಾಗಬಹುದು.

– ಕನ್ನಡಕ್ಕೆ : ಬಿ.ಶ್ರೀನಿವಾಸ, ಬೆಂಗಳೂರು

# ಮುಗುಳ್ನಗೆ



ಬಹಳ ವರ್ಷಗಳ ಹಿಂದೆ, ತಮ್ಮ ಜೀವನದ ಸುಖ, ಸಂತೋಷ, ನಗು, ಅನ್ನಾಹಾರ, ನಿದ್ರೆ – ಇವೆಲ್ಲವನ್ನೂ ತ್ಯಾಗ ಮಾಡಿದವರನ್ನು 'ಸಂತರು' ಎಂದು ಕರೆಯುತ್ತಿದ್ದರು. ಈಗ ಅವರನ್ನು 'ಗಂಡಂದಿರು' ಎನ್ನುತ್ತಾರೆ.

★★★

ಜೀವನದಲ್ಲಿನ ಮೂರು ಹಂತಗಳ ವಿಚಿತ್ರ ಹೀಗಿದೆ: ಟೀನೇಜ್‌ನಲ್ಲಿ – ಸಮಯ ಮತ್ತು ಎನರ್ಜಿ ಇರುತ್ತದೆ. ಆದರೆ, ದುಡ್ಡು ಇರಲ್ಲ,
ಕೆಲಸ ಮಾಡೋ ವಯಸ್ಸಲ್ಲಿ – ದುಡ್ಡು ಮತ್ತು ಎನರ್ಜಿ ಇರುತ್ತದೆ. ಆದರೆ, ಸಮಯ ಇರಲ್ಲ, ವಯಸ್ಸಾದ ಕಾಲದಲ್ಲಿ – ಸಮಯ, ದುಡ್ಡು ಎರಡೂ ಇರುತ್ತೆ. ಆದರೆ, ಎನರ್ಜಿ ಇರಲ್ಲ!

★★★

ಒಮ್ಮೆ ವ್ಯಕ್ತಿಯೊಬ್ಬ ಬುದ್ಧನನ್ನು ಕೇಳಿದ: ''ನಿನ್ನ ಪ್ರೀತಿಗೂ, ನನ್ನ ಪ್ರೀತಿಗೂ ವ್ಯತ್ಯಾಸ ಏನು?''

ಬುದ್ಧ ನಕ್ಕು ಹೇಳಿದ: ''ಗಿಡದಲ್ಲಿನ ಗುಲಾಬಿ ಹೂವು ನನ್ನ ಪ್ರೀತಿ, ನೀನು ಕೈಯಲ್ಲಿ ಹಿಡಿದಿರುವ ಗುಲಾಬಿ ನಿನ್ನ ಪ್ರೀತಿ!''

★★★

ಮೇಷ್ಟ್ರು ವಿದ್ಯಾರ್ಥಿಯ ತಂದೆಗೆ ಹೇಳಿದರು: ''ನಿಮ್ಮ ಮಗನಿಗೆ ಟೀವಿಯಲ್ಲಿ ಬರೋ ಕ್ವಿಝ್ ತೋರಿಸಬೇಡಿ''

ತಂದೆ: ''ಯಾಕೆ ಮೇಷ್ಟ್ರೇ?''

ಮೇಷ್ಟ್ರು: ''ನಿಮ್ಮ ಅಪ್ಪ ಯಾರೋ ಅಂತಾ ಕೇಳಿದರೆ, ನಾಲ್ಕು ಆಪ್ಷನ್ ಕೊಡಿ ಅಂತಾನೆ!''

★★★

ಟೀಚರ್: ''ಕಂಜೂಸ್ ಅಂದ್ರೆ ಯಾರು?''

ಗುಂಡ: ''ನೂರು ಎಸ್ಸೆಮ್ಮೆಸ್ ಮೆಸೇಜ್ ರಿಸೀವ್ ಮಾಡಿ, ಒಂದಕ್ಕೂ ರಿಪ್ಲೇ ಮಾಡದೆ ಇರೋದು''

ಟೀಚರ್: ''ಯಾರೋ ಅದು?''

ಗುಂಡ: ''ನಿಮ್ಮ ಮಗಳು ಮಿಸ್!''

ಟಿವಿಎಸ್‌ನಲ್ಲಿ ಬಂದೆ, 'ಹಾಯ್' ಅಂದ್ಳು. ಪಲ್ಸಾರ್‌ನಲ್ಲಿ ಬಂದೆ 'ಹಲೋ' ಅಂದ್ಳು. ಕಾರ್‌ನಲ್ಲಿ ಬಂದೆ 'ಡಾರ್ಲಿಂಗ್' ಅಂದ್ಳು. ಇವೆಲ್ಲಾ ನನ್ ಫ್ರೆಂಡ್‌ದು ಅಂದೆ 'ಅಣ್ಣಾ! ಅವನೆಲ್ಲಿ?' ಅಂದ್ಳು!.

★★★

ಟೀಚರ್: ''ಟರ್ಕಿ ದೇಶದ ಜನರನ್ನು **TURKS** ಅಂತಾರೆ, ಹಾಗಾದ್ರೆ, ಜರ್ಮನಿ ದೇಶದ ಜನರನ್ನು ಏನಂತಾರೆ ಹೇಳಿ''

ವಿದ್ಯಾರ್ಥಿ: '' **GERMS** ಅಂತಾರೆ ಮಿಸ್!''

★★★

ಸರ್ದಾರ್ ತಾನು ಸಮೋಸ ತಿನ್ನೋವಾಗ ಅದರ ಮೇಲಿನ ಹೊದಿಕೆಯನ್ನು ತೆಗೆದು ಬಿಸಾಡಿ, ಅದರೊಳಗಿನ ಆಲೂಗಡ್ಡೆಯನ್ನು ಮಾತ್ರ ತಿಂದ. ಇದ್ಯಾಕೋ ಹೀಗೆ ಅಂತಾ ಕೇಳಿದ ಸ್ನೇಹಿತನಿಗೆ ಸರ್ದಾರ್ಜಿ ಹೇಳಿದ : ''ಹೊರಗಿನ ತಿಂಡಿಯನ್ನು ತಿನ್ನಬೇಡಾ ಅಂತಾ ಡಾಕ್ಟರ್ ಹೇಳಿದ್ದಾರೆ!''

★★★

ತನ್ನ ಸ್ನೇಹಿತನಿಗೆ ಒಂದು ಕಥೆ ಹೇಳಿ, ಅವನಿಂದ ಗುಂಡ ಚೆನ್ನಾಗಿ ಒದೆ ತಿಂದ. ಗುಂಡ ಹೇಳಿದ ಆ ಕಥೆ ಹೀಗಿದೆ : ''ಸ್ವರ್ಗದಲ್ಲಿ ಒಬ್ಬೊಬ್ಬರದೂ ಒಂದೊಂದು ಗಡಿಯಾರ ಇದೆಯಂತೆ, ಒಂದು ಸುಳ್ಳು ಹೇಳಿದ್ರೆ ಅದು, ಒಮ್ಮೆ ಚಲಿಸುತ್ತಂತೆ. ಹರಿಶ್ಚಂದ್ರನದು ಒಮ್ಮೆಯೂ ಚಲಿಸಲಿಲ್ಲವಂತೆ. ನನ್ನದು ಬಹುಶಃ ಒಂದೆರಡು ಬಾರಿ ಮಾತ್ರ ಚಲಿಸಿರಬೇಕು. ನಿನ್ನ ಗಡಿಯಾರವನ್ನು ದೇವರು ಟೇಬಲ್ ಫ್ಯಾನ್ ತರಹ ಬಳಸುತ್ತಿದ್ದಾನಂತೆ!''

★★★

(ಮೂಲ: ಸಂಪಾದಕರ ಮೊಬೈಲಿಗೆ ಬಂದ ಜೋಕ್ಸ್‌ಗಳಿಂದ ಆಯ್ದದ್ದು)

# ಕರ್ನಾಟಕ ಪಿರಮಿಡ್ ಧ್ಯಾನ ಪ್ರಚಾರ ಟ್ರಸ್ಟ್

**ಬ್ರಹ್ಮರ್ಷಿ ಪತ್ರೀಜಿ ಅವರ ಸಂಕಲ್ಪ:**

'ಧ್ಯಾನ ಜಗತ್ 2012' ಇದು ಬ್ರಹ್ಮರ್ಷಿ ಸುಭಾಷ್ ಪತ್ರೀಜಿಯವರ ನಿನಾದ. ನಾವಿರುವ ಭೂಮಂಡಲವನ್ನು ರಕ್ಷಿಸಿಕೊಳ್ಳಬೇಕಾದುದು ನಮ್ಮೆಲ್ಲರ ಆದ್ಯ ಕರ್ತವ್ಯ. ನಾವು ನಮ್ಮ ಮಕ್ಕಳಿಗಾಗಿ ಹಣ ಆಸ್ತಿಗಳು ಏನೆಲ್ಲಾ ಮಾಡುತ್ತೇವೆ. ಆದರೆ ಅವರು ಮುಂದಿನ ದಿನಗಳಲ್ಲಿ ಜೀವಿಸಲು ಸಾಧ್ಯವಾಗದೇ ಇರುವ ರೀತಿಯಲ್ಲಿ ಭೂಮಂಡಲ ಬದಲಾಗುತ್ತಿದೆ. ಇದಕ್ಕೆ ನಾವೆಲ್ಲರೂ ಕೂಡ ಕಾರಣರು. ಈಗ ನಮ್ಮ ಮುಂದಿನ ಪೀಳಿಗೆಗೆ ಬೇಕಾಗಿರುವುದು ಹಣ ಅಂತಸ್ತು ಅಲ್ಲವೇ ಅಲ್ಲ. ಅವರಿಗೆ ಬೇಕಾಗಿರುವುದು ಸ್ವಚ್ಛವಾದ ನಿಸರ್ಗದಿಂದ ಕೂಡಿದ ಈ ಭೂಮಿಯ ಸಹಜತ್ವ

**'ಧ್ಯಾನ ಜಗತ್ 2012' ಯಾಕೆ?**

ಮುಂದೊಂದು ದಿನ "ಗ್ಲೋಬಲ್ ವಾರ್ಮಿಂಗ್" ಎಂಬ ಮಹಾಮಾರಿ ಈ ಭೂಮಿಯನ್ನು ಅಲ್ಲೋಲ ಕಲ್ಲೋಲ ಮಾಡಲಿದೆ ಎಂಬುದು ಕಠೋರ ಸತ್ಯ. ಆದರಿಂದ ಈ ಭೂಮಿಯನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಧ್ಯಾನ ಜಗತ್ ನಿರ್ಮಾಣವಾಗಬೇಕಾಗಿದೆ.

**'ಧ್ಯಾನ ಜಗತ್ 2012' ಗಾಗಿ ಕಂಕಣ: ಟ್ರಸ್ಟ್ ಉಗಮ:**

ಈ ಭೂಮಂಡಲದ ಬಿಸಿಯಿಂದ (ಗ್ಲೋಬಲ್ ವಾರ್ಮಿಂಗ್) ಪೃಥ್ವಿಯನ್ನು ರಕ್ಷಿಸಲು ನಾವೆಲ್ಲ ಕಂಕಣಬದ್ಧರಾದರೆ, ಅದನ್ನು ತಡೆಗಟ್ಟಲು ಸಾಧ್ಯವಿದೆ. ಆದರೆ 2012 ತುಂಬಾ ಹತ್ತಿರದಲ್ಲಿದೆ. ಇಂದಿನಿಂದ ಪ್ರತಿದಿನ, ಪ್ರತಿ ಕ್ಷಣವೂ ಸಹ ನಮಗೆ ಅತ್ಯಮೂಲ್ಯವಾದುದು. ಆದಕ್ಕಾಗಿಯೇ ನಾವು ಕರ್ನಾಟಕ ಧ್ಯಾನ ಪ್ರಚಾರ ಟ್ರಸ್ಟ್ ಸ್ಥಾಪಿಸಿರುವುದು.

**ಟ್ರಸ್ಟ್‌ನ ಉದ್ದೇಶಗಳು:**

1. ಪ್ರತಿಯೊಬ್ಬರ ಮನಸ್ಸು ಪರಿಶುದ್ಧವಾಗಬೇಕು
2. ನಾವು ಕೇವಲ ದೇಹವಲ್ಲ, ನಾವು ಅಪಾರ ಪ್ರಾಣಶಕ್ತಿಯಿಂದ ತುಂಬಿಕೊಂಡಿರುವ ಪರಮಚೇತನ ಎಂಬುದನ್ನು ಎಲ್ಲರಿಗೂ ತಿಳಿಯುವಂತೆ ಮಾಡುವುದು.
3. ನಾವು ಹೇಗೆ ಸ್ವಚ್ಛಂದವಾಗಿ ಜೀವಿಸುತ್ತಿದ್ದೇವೋ ಹಾಗೇಯೇ ಉಳಿದ ಎಲ್ಲಾ ಜೀವ ಜಂತುಗಳು, ಜಲಚರಗಳು ವೃಕ್ಷರಾಶಿಗಳು ನಮ್ಮಂತೆ ಜೀವಿಸಲು ಅವುಗಳಿಗೆ ಅವಕಾಶ ಕಲ್ಪಿಸಿಕೊಡುವ ತಿಳುವಳಿಕೆಯನ್ನು ಎಲ್ಲರಲ್ಲಿ ಮೂಡಿಸುವುದು.
4. ನಾವೆಲ್ಲರೂ ಸಸ್ಯಾಹಾರಿಗಳಾಗಿ ಗಿಡಮರಗಳು ಬೆಳೆಸುವುದು ಹಾಗೂ ಮನಸ್ಸಿನಲ್ಲಿರುವ ಮಲಿನವನ್ನು ಸಂಪೂರ್ಣವಾಗಿ ಅಳಿಸಿ ಹಾಕುವುದು.
5. ಜಾತಿ, ಮತ, ಪ್ರಾಂತೀಯತೆ, ದೇಶವೆಂಬ ಎಲ್ಲ ಮಿತಿಗಳನ್ನು ದಾಟಿ ಜೀವಿಸುವುದು.
6. ಮೊದಲು ಕರ್ನಾಟಕವನ್ನು ಒಂದುಗೂಡಿಸುವ ನಂತರ ದೇಶವನ್ನು ತದ ನಂತರ ಪ್ರಪಂಚವನ್ನು ಒಂದುಗೂಡಿಸುವ,

   ಪ್ರಯತ್ನದಲ್ಲಿ ಪ್ರತಿಯೊಬ್ಬರು ಭಾಗಿಯಾಗುವಂತೆ ಮಾಡುವುದು.
7. ಟ್ರಸ್ಟ್‌ಗೆ ದೊರೆಯುವ ಎಲ್ಲಾ ಮಾಹಿತಿಗಳನ್ನು ಎಲ್ಲರ ಜೊತೆಗೆ ಸಮರ್ಪಕವಾಗಿ ಹಂಚಿಕೊಳ್ಳುವುದಕ್ಕಾಗಿ ಒಂದು ವಿಶೇಷವಾದ ವೇದಿಕೆ ನಿರ್ಮಿಸುವುದು.
8. ಪ್ರಕೃತಿಗೆ ಹೊಂದಿಕೊಂಡು ಹೇಗೆ ಜೀವನ ನಡೆಸಬೇಕೆಂಬುದು ತಿಳಿದು ತನ್ಮೂಲಕ 'ಪರಿಸರ ಪ್ರೇಮಿ' ಗಳಾಗಿ ಜೀವಿಸುವ ಕಲೆಯನ್ನು ಕಲಿಯುವುದು.
9. ಉದ್ದೇಶಿತ ಟ್ರಸ್ಟ್‌ನ ಆಜೀವ ಸದಸ್ಯರಿಗೆ (ಲೈಫ್ ಮೆಂಬರ್‌ಗೆ) ವಿಶೇಷ ಸೌಲಭ್ಯಗಳನ್ನು ಒದಗಿಸುವುದು.
10. ವಿಶ್ವದ ಮಹಾನ್ ಆಧ್ಯಾತ್ಮಿಕ - ಶಾಸ್ತ್ರಜ್ಞರ ಹಲವಾರು ಕೃತಿಗಳನ್ನು ಕನ್ನಡಕ್ಕೆ ತಂದು ಕನ್ನಡ ಭಾಷೆಯ ಕಂಪಿನ ಜೊತೆಯಲ್ಲಿ ವಿಶ್ವಭಾಷಿಕರ ಸೊಂಪು ಸಮ್ಮಿಳಿತಗೊಳಿಸುವುದು.
11. ಬ್ರಹ್ಮರ್ಷಿ ಪತ್ರೀಜಿಯವರ ತೆಲುಗಿನಲ್ಲಿರುವ ನೂರಾರು ಪರಿಕಲ್ಪನೆಗಳನ್ನು ಭಾಷಣಕಾರರಿಂದ ಹಾಗೂ ಸಂಗೀತದ ಸಮ್ಮಿಲನದೊಂದಿಗೆ ಕನ್ನಡದ ಧ್ವನಿ ಸುರುಳಿಗಳನ್ನಾಗಿ ಹೊರತರುವುದು.
12. ಭಾರತಾದ್ಯಂತವಿರುವ ಋಷಿಗಳು, ಶರಣರು, ಸಂತರು, ಯೋಗಿಗಳು ತಪಸ್ವಿಗಳು ಸಂಚರಿಸಿದ ಹಾಗೂ ಅವರು ಈ ನಾಡಿಗೆ ತಮ್ಮ ವಾಣಿಯಿಂದ ಸಂದೇಶಗಳನ್ನು ನೀಡಿದ ಸ್ಥಳಗಳನ್ನು ಆರಿಸಿ ಅಂತಹ ಸ್ಥಳಕ್ಕೆ ನಮ್ಮ **"ಟೂರ್ಸ್ ಮತ್ತು ಟ್ರಕ್ಕಿಂಗ್"** ಕಮಿಟಿ ಮೂಲಕ ಪ್ರತಿ ತಿಂಗಳು ಯಾತ್ರೆಯನ್ನು ಏರ್ಪಡಿಸುವ ಮೂಲಕ ಧ್ಯಾನ ಮಾಡುವ ಮತ್ತು ಧ್ಯಾನಾನುಭವ ಪಡೆಯುವ ಯೋಗವನ್ನು ಕಲ್ಪಿಸುತ್ತಿದ್ದೇವೆ.
13. ಬೆಂಗಳೂರಿನಲ್ಲಿ ಈಗಾಗಲೇ ನಿರ್ಮಿಸಿರುವ ವಿಶ್ವಾದಲ್ಲಿಯೇ ಅತಿ ದೊಡ್ಡ ಪಿರಮಿಡ್ಡನ್ನು ತೋರಿಸುವುದು ಹಾಗೂ ಅದರ ವಿಶೇಷತೆಯನ್ನು ವಿವರಿಸುವುದು.
14. ಮಾನಸಿಕ, ಆಧ್ಯಾತ್ಮಿಕ ಹಾಗೂ ಪ್ರಾಪಂಚಿಕವಾದ ಹಲವಾರು ಮಾರ್ಪಾಡುಗಳನ್ನು ನಮ್ಮ ನಮ್ಮಲ್ಲಿ ತರಲು ಪ್ರತಿ ತಿಂಗಳು ಪ್ರತಿಯೊಂದು ಜಿಲ್ಲೆಯಲ್ಲಿ ವಿಶೇಷವಾದ ಶಿಬಿರವನ್ನು ಏರ್ಪಡಿಸುವುದು.
15. ಪ್ರತಿ ತಿಂಗಳು ಒಂದು ಎರಡು ಮೂರನೇ ತಾರೀಖಿನಲ್ಲಿ ಕರ್ನಾಟಕದ ಪ್ರತಿಯೊಂದು ಗ್ರಾಮಗಳಿಂದ **ವಿಲೇಜ್ ಟು ವ್ಯಾಲಿ** ಎಂಬ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದು ಮತ್ತು ಪ್ರತಿಯೊಬ್ಬರಿಗೂ ವಿಶ್ವಾದ ಅತಿ ದೊಡ್ಡ ಪಿರಮಿಡ್‌ನ್ನು ತೋರಿಸುವುದು ಹಾಗೂ ಬ್ರಹ್ಮರ್ಷಿ ಪತ್ರೀಜಿಯವರ ದರ್ಶನ ಮಾಡಿಸುವುದು.
16. ಪಿರಮಿಡ್ ವ್ಯಾಲಿಗೆ ಸಂದರ್ಶನಕ್ಕಾಗಿ ಬಂದವರಿಗೆ ಪಿರಮಿಡ್ ಧ್ಯಾನದಿಂದೊದಗುವ ಮಹತ್ವದ ಲಾಭಗಳನ್ನು ತಿಳಿಸಿಕೊಡುವ ವ್ಯವಸ್ಥೆ ಮಾಡಿಕೊಡುವ ಜೊತೆಗೆ, ಅವರಿಗೆ ಉಚಿತ ವಸತಿ, ಊಟದ ವ್ಯವಸ್ಥೆ ಏರ್ಪಡಿಸುವುದು.

## ಆಜೀವ ಸದಸ್ಯತ್ವ [ಲೈಫ್ ಮೆಂಬರ್] ಪಡೆಯಲು ದೇಣಿಗೆ ರೂ.2500/-

ಆಜೀವ ಸದಸ್ಯರಿಗೆ ಕೆಳಕಂಡಂತೆ ಸೌಲಭ್ಯಗಳು ದೊರೆಯುತ್ತದೆ.

- ಧ್ಯಾನ ಕಸ್ತೂರಿ ಮಾಸ ಪತ್ರಿಕೆ 2 ವರ್ಷ ಉಚಿತ.
- ನಮ್ಮಲ್ಲಿ ಮುದ್ರಿತವಾದ ಪ್ರತಿ ಪುಸ್ತಕ, ಸಿ.ಡಿ. ಬೆಲೆಯಲ್ಲಿ 20 % ಡಿಸ್ಕೌಂಟ್
- ನಾವು ನಡೆಸಿಕೊಡುವ ಶಿಬಿರಗಳಿಗೆ 10% ಡಿಸ್ಕೌಂಟ್.
- ಟೂರ್ಸ್ ಮತ್ತು ಟ್ರಕ್ಕಿಂಗ್ ನಲ್ಲಿ 5% ಡಿಸ್ಕೌಂಟ್.
- 2 ವರ್ಷ ಉಚಿತವಾಗಿ ಪಡೆದ ನಂತರ, ಮತ್ತೆ ನಾವು ಧ್ಯಾನ ಕಸ್ತೂರಿಗೆ ಚಂದಾದಾರರಾದರೆ 10% ಡಿಸ್ಕೌಂಟ್.
- ಪ್ರತಿ ತಿಂಗಳು ಎಲ್ಲಾ ವಿವರಗಳೊಂದಿಗೆ ನಿಮಗೆ ಮಾಹಿತಿ ಸಮರ್ಪಿಸಲಾಗುತ್ತದೆ. ಹಾಗೂ ನಿಮಗೆ ಅಗತ್ಯವಿರುವ ಎಲ್ಲ ರೀತಿಯ ಮಾಹಿತಿಗಳು ದೂರವಾಣಿಯಲ್ಲಿ ಲಭ್ಯವಾಗುವಂತೆ ವ್ಯವಸ್ಥೆಗೊಳಿಸಲಾಗುವುದು.
- ಪಿರಮಿಡ್ ವ್ಯಾಲಿಯಲ್ಲಿ ನಡೆಯುವ ಎಲ್ಲಾ ಶಿಬಿರಗಳಿಗೆ 5% ಶೇಕಡಾ ರಿಯಾಯಿತಿಯನ್ನು ಕೊಡಲಾಗುವುದು.

## ಪೋಷಕರು (ಪ್ಯಾಟ್ರನ್) ಪಡೆಯಲು ದೇಣಿಗೆ ರೂ.5,000/-

ಧ್ಯಾನ ಕಸ್ತೂರಿ ಪೋಷಕರು ಪ್ರತಿಯೊಬ್ಬ ಪೋಷಕರಿಗೆ ಐದು ವರ್ಷ ಧ್ಯಾನ ಕಸ್ತೂರಿ ಉಚಿತವಾಗಿ ನೀಡಲಾಗುತ್ತದೆ. ಹಾಗೂ ಪೋಷಕರ ಕುಟುಂಬದ ಫೋಟೋವನ್ನು ಧ್ಯಾನ ಕಸ್ತೂರಿಯಲ್ಲಿ ಮುದ್ರಿಸಲಾಗುತ್ತದೆ. ಅಲ್ಲದೆ, ಅವರ ವಿವರಗಳನ್ನು ನೀಡಲಾಗುತ್ತದೆ ಮತ್ತು ಲೈಫ್ ಮೆಂಬರ್‌ಗೆ ಲಭ್ಯವಿರುವ ಸೌಲಭ್ಯಗಳನ್ನು ನೀಡಲಾಗುತ್ತದೆ.

**ಪ್ರಮುಖ ಸೂಚನೆ :**

ನಮ್ಮ ಧ್ಯಾನ ಕಸ್ತೂರಿ ಪುಸ್ತಕಗಳು ನಿಮಗೆ ತಲುಪದಿದ್ದಲ್ಲಿ, ಬೇರೆಯವರಿಗೂ ಈ ಪುಸ್ತಕ ದೊರೆಯದಿದ್ದಲ್ಲಿ ಈ ದೂರವಾಣಿಯನ್ನು ಸಂಪರ್ಕಿಸಿ : 080 26646899

## ಆಜೀವ ಸದಸ್ಯತ್ವ (ಲೈಫ್ ಮೆಂಬರ್) / ಪೋಷಕರು / ಧ್ಯಾನ ಕಸ್ತೂರಿಯ ಚಂದಾ ನಮೂನೆ

ಇವರಿಗೆ,

**ಕರ್ನಾಟಕ ಪಿರಮಿಡ್ ಧ್ಯಾನ ಪ್ರಚಾರ ಟ್ರಸ್ಟ್,**

**ನಂ.126, 2ನೇ ಮಹಡಿ, 7ನೇ ಮುಖ್ಯರಸ್ತೆ, 4ನೇ ಬ್ಲಾಕ್,**

ಪೊಲೀಸ್ ಸ್ಟೇಷನ್ ಎದುರು, ಜಯನಗರ, ಬೆಂಗಳೂರು - 560 011.

ಫೋನ್ : 080-26646899, 9481359920.

ಮಾನ್ಯರೇ,

ಧ್ಯಾನ ಪ್ರಚಾರ ಟ್ರಸ್ಟ್‌ನ ಆಜೀವ ಸದಸ್ಯತ್ವವನ್ನು ಪಡೆಯಲು ರೂ ........................ ನ್ನು ಧ್ಯಾನ ಪ್ರಚಾರ ಟ್ರಸ್ಟ್‌ನ ವಿಳಾಸಕ್ಕೆ ಪಾವತಿ ಮಾಡಿ ಕಳುಹಿಸಲಾಗಿದೆ.

ಡಿ.ಡಿ. ಸಂಖ್ಯೆ ................ ತಾರೀಖು .......................... ಕಾಲಾವಧಿ ................................

ಹೆಸರು ಮತ್ತು ವಿಳಾಸ : ..............................................................................................

ಜಿಲ್ಲೆ : .................................... ರಾಜ್ಯ : .................................... ಪಿನ್ ಕೋಡ್ : ..................................................

ಇ-ಮೇಲ್ .......................................................................... ಫೋನ್ : ..................................

**1 ವರ್ಷಕ್ಕೆ ಚಂದಾ: 300/-    2 ವರ್ಷಕ್ಕೆ ಚಂದಾ: 550/-**




ಧ್ಯಾನ ಕಸ್ತೂರಿ ಪತ್ರಿಕೆ ಬಿಡುಗಡೆ - CMRS ಕೇರ್ ಸೆಂಟರ್,ಬೆಂಗಳೂರು



ರಾಮದಾನ ದೇವಾಲಯದಲ್ಲಿ ಪತ್ರೀಜಿಯವರ ಧ್ಯಾನ ತರಗತಿ, ಬೆಂಗಳೂರು



ಪಿರಮಿಡ್ ವ್ಯಾಲಿಯಲ್ಲಿ ಪೈಮಾ ಮಾಸ್ಟರ್ಸ್ ಆದ ಶ್ರೀ ಬಾಲಾಜಿ ಮತ್ತು
ಲಕ್ಷ್ಮಿರವರ ಪಿರಮಿಡ್ ಮ್ಯಾರೇಜ್ ಚಿತ್ರಗಳು



ಪಿರಮಿಡ್ ವ್ಯಾಲಿಯಲ್ಲಿ ಪೈಮಾ ಮಾಸ್ಟರ್ಸ್ ಆದ ಶ್ರೀ ಬಾಲಾಜಿ ಮತ್ತು
ಲಕ್ಷ್ಮಿರವರ ಪಿರಾಮಿಡ್ ಮ್ಯಾರೇಜ್ ಚಿತ್ರಗಳು



ಬಾಗೇಪಲ್ಲಿನಲ್ಲಿ ಪತ್ರೀಜಿಯವರ ಧ್ಯಾನ ತರಗತಿ



CMRS ಕೇರ್ ಸೆಂಟರ್‌ನಲ್ಲಿ ಪತ್ರೀಜಿಯವರ ಧ್ಯಾನ ತರಗತಿ,ಬೆಂಗಳೂರು

REGISTRATION DATED : 01-10-2008 :REG. NO :RNP /BGS/2105/2008-10

# ಪಿರಮಿಡ್ ಧ್ಯಾನಿಗಳ
# ಹದಿನೆಂಟು ಮಾರ್ಗದರ್ಶಕ ಸೂತ್ರಗಳು



1) ಸರಿಯಾದ ರೀತಿಯಲ್ಲಿ, ಅಂದರೆ, ಆನಾಪಾನಸತಿ ಪದ್ಧತಿಯಲ್ಲಿ ಕ್ರಮವಾಗಿ, ತಪ್ಪದೆ ನಿಯಮಿತವಾಗಿ ಧ್ಯಾನ ಮಾಡಬೇಕು ಮತ್ತು ಪ್ರತಿಯೊಬ್ಬರಿಗೂ ಈ ರೀತಿಯ ಸರಿಯಾದ ಧ್ಯಾನವನ್ನು ಕಲಿಸಬೇಕು.

2) ಸರಿಯಾದ ಆಧ್ಯಾತ್ಮಿಕ ಪುಸ್ತಕಗಳನ್ನು ಓದಬೇಕು; ಆ ಪುಸ್ತಕಗಳನ್ನು ಇತರರೂ ಓದುವಂತೆ ಮಾಡಬೇಕು.

3) ಧ್ಯಾನಾನುಭವಗಳನ್ನು, ಪುಸ್ತಕಗಳಿಂದದೊರೆತ ಆಧ್ಯಾತ್ಮಿಕ ಜ್ಞಾನವನ್ನು ಪ್ರತಿಯೊಬ್ಬ ಧ್ಯಾನಿಯೊಡನೆಯೂ ಹಂಚಿಕೊಳ್ಳುತ್ತಿರಬೇಕು.

4) ಪ್ರತಿ ದಿನವೂ ಸಾಧ್ಯವಾದಷ್ಟು ಹೆಚ್ಚು.... ಹೆಚ್ಚು.... ಸಮಯ ಮೌನದಲ್ಲಿ ಇರಬೇಕು.

5) ಹುಣ್ಣಿಮೆ ದಿನ ಧ್ಯಾನ ಮಾಡುವುದು, ಮಾಡಿಸುವುದು.

6) ಪಿರಮಿಡ್ ಶಕ್ತಿಯನ್ನು ಅನೇಕ ವಿಧವಾಗಿ ಉಪಯೋಗಿಸಿಕೊಳ್ಳುವುದು.

7) ಔಷಧಿಗಳನ್ನು ಬಳಸದೇ ಸಾಧ್ಯವಾದಷ್ಟು ಧ್ಯಾನ ಶಕ್ತಿಯಿಂದ ರೋಗಗಳನ್ನು ಉಪಶಮನ ಮಾಡಿಕೊಳ್ಳಬೇಕು.

8) ಯಾವುದೇ ಬಗೆಯ ಮಾಂಸಾಹಾರ ಸೇವನೆಯನ್ನು ಮಾಡದಿರುವುದು, ಅದನ್ನು ಸಂಪೂರ್ಣವಾಗಿ ತಿರಸ್ಕರಿಸುವುದು.

9) ಕೇವಲ ಶಾಕಾಹಾರವನ್ನು ಸೇವಿಸಬೇಕು, ಅದೂ ಮಿತವಾಗಿ.

10) ಪ್ರತ್ಯೇಕವಾದ ಆಧ್ಯಾತ್ಮಿಕ ವಸ್ತ್ರಧಾರಣೆಯನ್ನು ಧರಿಸದಿರುವುದು.

11) ಚಿಕ್ಕ ವಯಸ್ಸಿನಿಂದಲೇ ಎಲ್ಲ ಮಕ್ಕಳಿಗೆ ಧ್ಯಾನ ಶಿಕ್ಷಣವನ್ನು ಕೊಡಬೇಕು.

12) ಶಿಷ್ಯತ್ವ ಎನ್ನುವುದಿಲ್ಲದೆ ಎಲ್ಲರೂ ಮಾಸ್ಟರ್‌ರಾಗಿ ಬೆಳೆಯುವುದು.

13) ಆಧ್ಯಾತ್ಮಿಕ ಶಿಕ್ಷಣದಲ್ಲಿ ಹಣವಿನಿಮಯ ಇರಕೂಡದು.

14) ವಿಗ್ರಹ ಪೂಜೆ, ವ್ಯಕ್ತಿಪೂಜೆ, ಮುಂತಾದವುಗಳ ಆಚರಣೆ ಬೇಡ.

15) ಅವರವರ ಸಮಸ್ಯೆಗಳನ್ನು ಅವರೇ ತಮ್ಮ ಸ್ವಂತ ಆತ್ಮ ಶಕ್ತಿಯನ್ನು ಉಪಯೋಗಿಸಿ ಪರಿಹರಿಸಿಕೊಳ್ಳುವುದು.

16) ಗೃಹಸ್ಥರಾಗಿ ಸಮಾಜದಲ್ಲಿ ಇರುತ್ತ ಅವರವರ ಕೆಲಸಗಳನ್ನು ಅವರೇ ಮಾಡಿಕೊಳ್ಳುತ್ತಾ, ಆತ್ಮಜ್ಞಾನವನ್ನು ಸಂಪಾದಿಸಿಕೊಳ್ಳುವುದು.

17) ಧ್ಯಾನಾನುಭವಗಳನ್ನು ತಪ್ಪದೇ ಗ್ರಂಥರೂಪದಲ್ಲಿ ಪ್ರಕಟಿಸುವುದು.

18) ಎಲ್ಲಾ ಗ್ರಾಮಗಳಲ್ಲೂ, ಎಲ್ಲಾ ಪಟ್ಟಣಗಳಲ್ಲೂ ಪಿರಮಿಡ್ ಧ್ಯಾನ ಕೇಂದ್ರಗಳನ್ನು, ಸ್ಪಿರಿಚ್ಯುವಲ್ ಸೊಸೈಟಿಗಳನ್ನು ತಪ್ಪದೆ ಸ್ಥಾಪಿಸುವುದು.

WWW.PSSMOVEMENT.ORG



PYRAMID SPIRITUAL SOCIETIES MOVEMENT, INDIA

